# ನಿಗಮಾಗಮ ಮತ್ತು ವಚನಾಗಮಗಳ
# ಶ್ರೌತಾ ಶ್ರೌತ ದೃಷ್ಟಿ



ಡಾ. ವ್ಹಿ. ಎಸ್. ಕಂಬಿ



ಶ್ರೀ ಜಗದ್ಗುರು ರೇಣುಕ ಪ್ರಕಾಶನ, ತೆಗ್ಗಿನಮಠ
ಹರಪನಹಳ್ಳಿ.

# ನಿಗಮಾಗಮ ಮತ್ತು ವಚನಾಗಮಗಳ
# ಶ್ರೌತಾ ಶ್ರೌತ ದೃಷ್ಟಿ

ಡಾ. ವ್ಹಿ. ಎಸ್. ಕಂಬಿ

ಶ್ರೀ ಜಗದ್ಗುರು ರೇಣುಕ ಪ್ರಕಾಶನ, ತೆಗ್ಗಿನಮಠ
ಹರಪನಹಳ್ಳಿ.

ಅರ್ಪಣ

ಶ್ರೀ ಶ್ರೀ ಶ್ರೀ ಸಿದ್ಧಲಿಂಗಾರಾಧ್ಯ ಶಿವಾಚಾರ್ಯ
ಮಹಾಸ್ವಾಮಿಗಳು
ಗವಿಮಠ, ಚಿಕ್ಕನಹಳ್ಳಿ,
ಅವರ ದಿವ್ಯ ಪಾದಾರವಿಂದಗಳಿಗೆ

# ಶ್ರೀ ಶ್ರೀ ಶ್ರೀ ಸಿದ್ಧಲಿಂಗಾರಾಧ್ಯ

# ಮಹಾಸ್ವಾಮೀಜಿ ಅವರ

## ಶುಭಾಶೀರ್ವಾದ ಸಂದೇಶ

"ನಿಗಮಾಗಮ ಮತ್ತು ವಚನಾಗಮಗಳ ಶ್ರೌತಾಶ್ರೌತ ದೃಷ್ಟಿ" ಎಂಬ ಸಂಶೋಧನಾ ಪ್ರಬಂಧ ಮಾಲೆಯನ್ನು ಡಾ॥ ವ್ಹಿ. ಎಸ್ ಕಂಬಿಯವರು ರಚಿಸಿದ್ದು ಇದರಲ್ಲಿ ಧರ್ಮದ ಬಗ್ಗೆ ತಿಳಿಸುತ್ತಾ ಅದು ವೇದಮಯ, ಶೃತಿ ಮಯವೆಂಬುದನ್ನು ಆಗಮಗಳು ನಂತರದ ಉಪಭೃಂಹಣ, ಸ್ಮೃತಿ, ಸೂತ್ರ ಭಾಷ್ಯಗಳು ತಿಳಿಸುತ್ತವೆ.

ವೇದಾಗಮ ಗ್ರಂಥಗಳಲ್ಲಿ ಹೇಳಲ್ಪಟ್ಟ ತತ್ವಗಳನ್ನು ತಮ್ಮ ಸಾಹಿತ್ಯದ ಪಡಿಯಚ್ಚಿನಲ್ಲಿ ಒತ್ತಿ ಅದಕ್ಕೆ ಒಂದು ವಿಶಿಷ್ಟ ರೂಪವನ್ನು ಕೊಟ್ಟ ತಿಳಿಗನ್ನಡದ ಉಡುಪನ್ನು ತೊಡಿಸಿ ಪಂಡಿತ ಪಾಮರರಿಗೆ ಮನೋಹರ ಮತ್ತು ಮನದಟ್ಟಾಗುವಂತೆ ಶಿವಶರಣರು ವಚನ ಶಾಸ್ತ್ರವನ್ನು ರಚಿಸಿದ್ದಾರೆ. ವೇದ, ಉಪನಿಷತ್ತು ಮತ್ತು ಆಗಮಾದಿಗಳಲ್ಲಿ ಉಕ್ತವಾದ, ಅಬಾಧಿತ ಸನಾತನ ಉದಾತ್ತ ವಿಚಾರಗಳೇ ಈ ವಚನಶಾಸ್ತ್ರಕ್ಕೆ ಆಧಾರ ಭೂತವಾದವುಗಳು. ಆಗಮ ಗ್ರಂಥಗಳಿಗೂ ವಚನಕಾರರ ತತ್ವಗಳಿಗೂ ಸಂಬಂಧವುಂಟು. ಆಗಮ ಗ್ರಂಥಗಳಲ್ಲಿಯೇ ಷಟ್ಸ್ಥಲದ ವಿವರಣೆಯಿದೆ. ಅವರ ತತ್ತ್ವಗಳೆಲ್ಲ ವೇದಾಗಮೋಪನಿಷತ್‌ಗಳೊಳಗಿನಿಂದಲೇ ತೆಗೆದುಕೊಂಡಂತಹವಾಗಿರುತ್ತವೆ.

ಲೇಖಕರು ಈ ಪ್ರಬಂಧ ಮಾಲೆಯಲ್ಲಿ ನಿಗಮಾಗಮಗಳ ಮತ್ತು ವಚನಾಗಮಗಳ ಬಗ್ಗೆ ಪೂರ್ಣವಾಗಿ ಬಹಳ ಚೆನ್ನಾಗಿ ವಿಮರ್ಶಿಸಿದ್ದಾರೆ. ಇವರಿಂದ ಇನ್ನೂ ಉತ್ತಮವಾದ ಬರಹಗಳು ಮೂಡಿಬರಲಿ ಹಾಗೂ ಎಲ್ಲಾ ವರ್ಗದ ಜನರೂ ಅಧ್ಯಯನ ಮಾಡಲೆಂದು ಹಾರೈಸುತ್ತಾ ಜನಮನದ ದೂಷಿತ ಭಾವನೆಗಳನ್ನು ದೂರೀಕರಿಸಿ, ಸದ್ಭಾವನೆ, ಭಾವೈಕ್ಯತೆಯನ್ನುಂಟು ಮಾಡುವಂತಾಗಲೆಂದು ಯಶಸ್ಸು ಕೋರಿ, ಮನದುಂಬಿ ಮಂಗಳವಾಗಲೆಂದು ಆಶೀರ್ವದಿಸಲಾಗಿದೆ.

# ಶುಭ ಹಾರೈಕೆ

ಜಗತ್ತಿನ ಸಕಲ ಭಾಷೆಗಳಲ್ಲಿ ಸಂಸ್ಕೃತವು ಹಿರಿಯಸ್ಥಾನದಲ್ಲಿದೆ. ನಮ್ಮ ದೇಶೀಯ ಭಾಷೆಗಳು ಸಂಸ್ಕೃತದಿಂದ ಸಿರಿವಂತವಾಗಿವೆ. ಸಂಸ್ಕೃತದಿಂದ ಸಮೃದ್ಧಿಯನ್ನು ಪಡೆಯದ ಭಾರತೀಯ ಭಾಷೆ ಇಲ್ಲ.

ವೇದ, ಆಗಮ, ಉಪನಿಷತ್ತು, ಭಗವದ್ಗೀತೆ, ಸೂತ್ರಗಳು, ಮುಂತಾದ ಗ್ರಂಥಗಳು ಸಂಸ್ಕೃತ ಭಾಷೆಯ ಶ್ರೇಷ್ಠ ಕೃತಿಗಳು. ವೇದವು ಜಗತ್ತಿನಲ್ಲಿಯೇ ಅತ್ಯಂತ ಪ್ರಾಚೀನ ಗ್ರಂಥ. ಲೌಕಿಕ ಮತ್ತು ಪಾರಮಾರ್ಥಿಕ ದಿವ್ಯೌಷಧಿಯ ಭಂಡಾರ ವೇದ. ರುದ್ರನು ವೇದದಲ್ಲಿ ವೈದ್ಯ. ಆತನೇ ಪರಬ್ರಹ್ಮ. ಈ ಮಾತು ವೇದದಲ್ಲಿ ರುವದನ್ನು ಪ್ರಸ್ತುತ ಗ್ರಂಥದಲ್ಲಿಯಂತೆ ಬೇರೆ ಹಲ ವಿದ್ವಾಂಸರೂ ಎತ್ತಿ ತೋರಿಸಿದ್ದಾರೆ. ರುದ್ರನು ವೇದವನ್ನು ಹರಣ್ಯಗರ್ಭನಿಗೆ ಹೇಳಿದ ಪ್ರಥಮಗುರು. ಅದೆ ರೀತಿ ಆಗಮಗಳಿಗೂ ಆತನೇ ಕರ್ತಾರ. ವೇದದ ಸಾರಸರ್ವಸ್ವ. ಕರ್ಮಮೀಮಾಂಸ ವೇದಧರ್ಮ ವಿಚಾರ; ಅದೇ ರೀತಿ ಅದರ ರಹಸ್ಯವಿದ್ಯೆಯೇ ಉಪನಿಷತ್ತು. ಇದೇ ಅನುಕ್ರಮವಾಗಿ ಶ್ರೌತ ಅಶ್ರೌತ. ಶ್ರೌತವೆಂದರೆ ವೇದಧರ್ಮ (ಕರ್ಮ) ಪ್ರತಿಪಾದಿಸುವ ಒಪ್ಪುವ ದೃಷ್ಟಿ. ಅಶ್ರೌತವೆಂದರೆ ವೇದಕರ್ಮ (ಧರ್ಮ) ಖಂಡಿಸಿ ವೇದವಿರೋಧಿಸುವ ವೈಚಾರಿಕ ದೃಷ್ಟಿ. ಇದೇ ಅಶ್ರೌತ ದೃಷ್ಟಿ. ಈ ರಹಸ್ಯವು ವೇದದಲ್ಲಿ ಇದೆ ಎಂಬುದನ್ನು ಪ್ರಸ್ತುತ ಕೃತಿ ಚಿತ್ರಿಸಿದೆ. ಈ ಕಾರ್ಯದಲ್ಲಿ ಪ್ರಸ್ತುತ ಲೇಖಕರು ವೇದ ಉಪನಿಷತ್ತುಗಳ ಭಾಗಗಳಿಂದ ಆಧಾರವೆಂದು ಉದ್ಧರಿಸಿದ್ದಾರೆ. ಇದರ ಜೊತೆಗೆ ಸುಪ್ರಸಿದ್ಧ ವಿದ್ವಾಂಸರ ವಿಚಾರ ಸರಣಿಯನ್ನು ಬಳಸಿಕೊಂಡು ಬರಹಕ್ಕೆ ಪರಿಸ್ಫುಟತೆಯನ್ನು ಒದಗಿಸಿದ್ದಾರೆ.

ಲೇಖಕರು ಅಶ್ರೌತ ದೃಷ್ಟಿ ಕ್ರಾಂತಿಕಾರಕ ದೃಷ್ಟಿ ಎಂಬುದನ್ನು ತಿಳಿಸಿ, ಈ ದೃಷ್ಟಿಯು ಯುಗಯುಗಗಳಲ್ಲಿ ಭಾರತೀಯ ಜನಾಂಗಕ್ಕೆ ಹೊಸ ಹೊಸ ಹುಟ್ಟನ್ನು ಕೊಟ್ಟಿರುವದನ್ನು ಸೂಚ್ಯವಾಗಿ ತಿಳಿಸಿದ್ದಾರೆ ಸಾಧಾರ ಪೂರ್ವಕ. ವೇದದಲ್ಲಿ ಜನ್ಮ ತಾಳಿದ ಇದು ಉಪನಿಷತ್ತಿನಲ್ಲಿ ಮರವಾಗಿ ಬೆಳೆದಿದೆ. ಆಗಮಗಳಲ್ಲಿ ಪಲ್ಲವ ಪುಷ್ಪಗಳಿಂದ ಆಕರ್ಷಣವಾಗಿದೆ. ವಚನಾಗಮದಲ್ಲಿ ಇದು ಪರಿಪಕ್ವ ಫಲವಾಗಿದೆ. ಈ ಮಧುರ ಫಲವು ವೈಚಾರಿಕ, ಸಾಮಾಜಿಕ, ಔದ್ಯೋಗಿಕ ಬದಲಾವಣೆಯನ್ನು ಉಂಟು ಮಾಡಿದೆ.

ಲೇಖಕರು ಈ ಕಾರ್ಯದಲ್ಲಿ ಪ್ರಾಚೀನ ಮತ್ತು ಅರ್ವಾಚೀನ ವಿಚಾರವಾದಿಗಳ ಬೆಳಕನ್ನು ಬಳಸಿಕೊಂಡಿದ್ದಾರೆ. ಈ ಕಠಿಣ ಕಾರ್ಯದಲ್ಲಿ ಮಾರ್ಗದರ್ಶನ ಪಡೆದಿದ್ದಾರೆ. ವಚನಕಾರರು ಭಾರತದ ವೈಚಾರಿಕ ಪರಂಪರೆಗೆ ಸಲ್ಲಿಸಿದ ಅಮೋಘ ಸೇವೆಯನ್ನು ಈ ಚಿಕ್ಕ ಕೃತಿಯಲ್ಲಿ ಗುರುತಿಸಬಹುದು. ಈ ಪರಿಶ್ರಮದ ಕಾರ್ಯವನ್ನು ಪ್ರಾಜ್ಞರಾದ ವಿದ್ವಾಂಸರು ಮೆಚ್ಚಿ ಸ್ವಾಗತಿಸುವಲ್ಲಿ ಸಂದೇಹವಿಲ್ಲ. ಈ ನಾಲ್ಕು ವಿಚಾರದ ಶುಭ ಹಾರೈಕೆಯನ್ನು ಬರೆಯಲು ಸಂತೋಷವೆನಿಸುತ್ತದೆ.

ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿ ಹೊಳಲು

# ತುಂಬಿ ಹೂ

ತಮ್ಮ ಹಲವು ಕೃತಿಗಳ ಮೂಲಕ ಈಗಾಗಲೇ ಪ್ರವರ್ಧ ಮಾನಕ್ಕೆ ಬಂದಿರು ವವರು ಮಿತ್ರವರ್ಯ ಡಾ. ವ್ಹಿ. ಎಸ್. ಕಂಬಿಯವರು. ವಿಶೇಷವಾಗಿ ವೀರಶೈವ ವಾಙ್ಮಯ ವಿವೇಚನೆಯ ಕಕ್ಷೆಯಲ್ಲಿ ತಮ್ಮ ಹೆಸರು ನಿಲ್ಲುವಂತಹ ಅಭ್ಯಾಸ ಯೋಗ್ಯ ಮೌಲಿಕ ಗ್ರಂಥ ರಚನೆ ಮಾಡಿದ್ದಾರೆ. ಅವರ ಗ್ರಂಥಗಳು ಕಥೆ ಕಾದಂಬರಿಗಳಲ್ಲ, ಅವರದು ಸೃಜನಾತ್ಮಕ ಸಾಹಿತ್ಯ ವಲಯವಲ್ಲ. ಅವರು ಆರಿಸಿಕೊಂಡಿರುವ ಪ್ರಧಾನ ಕ್ಷೇತ್ರ ಸಂಶೋಧನೆಗೆ ಸೇರಿದ್ದು; ಅದರಲ್ಲಿಯೂ ತಮ್ಮ ಲೇಖನ ಕೃಷಿಗೆ ಸೀಮಿತ ಗೊಳಿಸಿರುವುದು ಶೈವ ವಾಙ್ಮಯದ ವಿಶ್ಲೇಷಣೆ. ತಮ್ಮೆಲ್ಲ ಜ್ಞಾನ ಅಧ್ಯಯನ ಚಿಂತನ ವಿಚಾರಗಳನ್ನು ಈ ಬಗೆಯ ಸಂವಾದ ಜಿಜ್ಞಾಸೆಗೇ ಮೀಸಲಿರಿಸಿದ್ದಾರೆ. ಈ ದಿಕ್ಕಿನಲ್ಲಿಯೇ ಅವರು ಕಳೆದ ಎರಡೂವರೆ ದಶಕಗಳಿಂದ ನಿರಂತರವಾಗಿ ಅಭ್ಯಾಸ ಮಾಡುತ್ತ ಬಂದಿರುತ್ತಾರೆ. ಇದೇ ಮಾದರಿಯನ್ನು ಮುಂದುವರಿಸಿ ಬರೆದಿರುವ ಗ್ರಂಥ ಪ್ರಸ್ತುತ ಮುನ್ನುಡಿ ಬರೆಯುತ್ತಿರುವ 'ನಿಗಮಾಗಮ ಮತ್ತು ವಚನಾಗಮ ಗಳ ಶ್ರೌತಾಶ್ರೌತ ದೃಷ್ಟಿ' ಗ್ರಂಥ.

ಈ ಹೊತ್ತಗೆಯ ಹೆಸರೇ ಹೇಳುವ ಹಾಗೆ ಇದು ಸಾಮಾನ್ಯ ಓದುಗರಿಗೆ ಎಟುಕುವ ಲಲಿತ ಸಾಹಿತ್ಯ ಕೃತಿಯಲ್ಲ. ಇದರ ಅಭ್ಯಾಸ ಅಧ್ಯಯನಕ್ಕೆ ತೊಡಗು ವವರಿಗೆ ಪೂರ್ವ ಸಿದ್ಧತೆ ಬೇಕಾಗುತ್ತದೆ. ಕಡಮೆಯೆಂದರೂ ಶೈವಾಗಮ ಸಿದ್ಧಾಂತ ಗಳ ಪ್ರಾಥಮಿಕ ಪರಿಚಯವಿರಬೇಕಾಗುತ್ತದೆ. ಕನ್ನಡ ವಚನ ಸಾಹಿತ್ಯದೊಂದಿಗೆ ಸಂಸ್ಕೃತ ದರ್ಶನ ಸಾಹಿತ್ಯದಲ್ಲಿಯೂ ಬಳಕೆಯಿದ್ದರೆ ಒಳ್ಳೆಯದು. ಷಡ್ದರ್ಶನಗಳಲ್ಲಿ ಪ್ರವೇಶವಿದ್ದರಂತೂ ಈ ಕೃತಿ ಕೈಪಿಡಿಯೂ ಕೈದೀವಿಗೆಯೂ ಆಗುತ್ತದೆ.

ಮುಖ್ಯವಾಗಿ ಇದು ಆಗದು ಕ್ಷೇತ್ರಗಳಲ್ಲಿನ ಆಲೋಚನೆಗಳನ್ನೂ ಗಂಭೀರ ಚರ್ಚೆಗಳನ್ನೂ ಚಿಂತನ ಮಂಥನ ಮಾಡಿದೆ. ಮೇಧಾವಿಗಳ ಬೌದ್ಧಿಕ ವಿಲಾಸವನ್ನು ತನ್ನ ಹೊಟ್ಟೆಯೊಳಗಿಟ್ಟುಕೊಂಡಿರುವ ಪುಸ್ತಕ. ಶೈವ ಸಿದ್ಧಾಂತದಲ್ಲಿ ಷಟ್ಸ್ಥಲಗಳ ನಿರೂಪಣೆ ಕೇಳಿದ್ದೇವೆ. ಡಾ. ವ್ಹಿ. ಎಸ್. ಕಂಬಿಯವರು ಮೂಲಕ್ಕೆ ಹೋಗಿ ಆಕರ ಗ್ರಂಥಗಳ ತಲಸ್ಪರ್ಶಿಯಾದ ಪಾಂಡಿತ್ಯ ಪಡೆದವರು, ಅದರಲ್ಲೇ ಈಸಾಡಿ ಮಿಂದೆದ್ದು ಬಂದವರು. ನಿಗಮಾಗಮಗಳನ್ನು ಕರತಲಾ ಮಲಕ ಮಾಡಿಕೊಂಡ ವರು. ನಿಗಮಾಗಮಗಳನ್ನು ವಿಶ್ಲೇಷಿಸಿ ವಿವರಿಸಲು ಬೇಕಾದ ವಾಙ್ಮಯ ತಪಸ್ಸು ಮಾಡಿದವರು. ಆಧುನಿಕ ತತ್ತ್ವಜ್ಞಾನದ ಪರಮ ಜ್ಞಾನಿಗಳ ಮೌಲಿಕ ಕೃತಿ

ಗಳನ್ನೂ ಅಭ್ಯಸಿಸಿದವರು. ಅದರಿಂದ ಒಂದು ವಿಶಾಲವಾದ ಉನ್ನತವಾದ ಭೂಮಿಕೆಯಲ್ಲಿ ನಿಂತು ಪಾಶ್ಚಿಮಾತ್ಯರ ನಿರೂಪಣೆಯ ಬೆಳಕಿಗೆ ಹಿಡಿದು ತಮ್ಮ ಶಾಸ್ತ್ರ ಕೃತಿಗಳ ಒಳಹೊರಗನ್ನು ಸೂಕ್ಷ್ಮ ನೋಡಬಲ್ಲ ಸಿದ್ಧತೆ ಸಾಮರ್ಥ್ಯ ಪಡೆದವರು; ಈ ಬಗೆಯ ತೌಲನಿಕ ಪರಾಮರ್ಶೆಯೇ ಪ್ರಸ್ತುತ ಗ್ರಂಥದ ಕೇಂದ್ರ ಪ್ರಜ್ಞೆ.

ನಿಗಮಾಗಮಗಳನ್ನೂ ವಚನಾಗಮವನ್ನೂ ಡಾ. ವ್ಹಿ. ಎಸ್. ಕಂಬಿಯವರು ಇಲ್ಲಿ ಹೊಸ ದೃಷ್ಟಿಯಿಂದ ಪರಿಶೀಲಿಸಿ ಒರೆಯಿಟ್ಟು ನೋಡಿದ್ದಾರೆ. ಆಗಮಗಳ ಕಾಲ, ಸಾಹಿತ್ಯಶಿಲ್ಪ, ಆಗಮಭೇದಗಳು, ಚತುಷ್ಪಾದಗಳು—ಇವೆಲ್ಲದರ ಪರಾಮರ್ಶೆ ಸಾರವತ್ತಾಗಿಯೇ ಬಂದಿದೆ. ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಭಗವದ್ಗೀತೆಗಳ ಆಶ್ರೌತತೆ ಹೇಗೆ ಎಂತು ಎಂಬುದರ ಸ್ವರೂಪವನ್ನು ಆಧಾರವಿತ್ತು ಬಿಡಿಸಿ ತೋರಿಸಿದ್ದಾರೆ. ನಿಗಮಾಗಮ ಯಜ್ಞಯಾಗ ಜಾತಿ ಮುಂತಾದ ಅವೈಜ್ಞಾನಿಕ ಪರಿಕಲ್ಪನೆಯ ಹುಸಿತನವನ್ನು ಖಂಡಿಸಿದ್ದಾರೆ. ಸಮೀಕ್ಷಾಸ್ಥಲ, ಅನ್ವೇಷಣಾಸ್ಥಲ, ವ್ಯವಸ್ಥೆಯ ವಿಚಾರಸ್ಥಲ, ಸಂಬಂಧಸ್ಥಲ, ಪರಾಮರ್ಶಕ ಸ್ಥಲ, ಶೋಧ ಸ್ಥಲ, ಮತ್ತು ಪರ್ಯಾಯ ವ್ಯವಸ್ಥೆಯ ಸ್ಥಲ-ಎಂಬ ಹೊಸ ಪರಿಭಾಷೆಯಲ್ಲಿಟ್ಟು ಅಧ್ಯಾಯಗಳನ್ನು ಈ ವಿಷಯಗಳಿಗೆ ಒಳ ಪಟ್ಟು ವ್ಯವಸ್ಥಿತವಾಗಿ ವಿಂಗಡಿಸಿ ವಿವೇಚಿಸಿದ್ದಾರೆ. ಇಲ್ಲಿನ ವಿವರಣೆಯ ಸ್ವೋಪಜ್ಞತೆಯನ್ನು ಅಭಿಜ್ಞತೆಯನ್ನು ಈ ಕ್ಷೇತ್ರಗಳ ಪ್ರಾಜ್ಞರು ವಿಮರ್ಶಿಸಬೇಕು.

ಡಾ. ವ್ಹಿ. ಎಸ್. ಕಂಬಿಯವರ ಪರಿಶ್ರಮ ಎಷ್ಟೆಂಬುದನ್ನು ಇಂಥ ಕ್ಷೇತ್ರದಲ್ಲಿ ವ್ಯವಸಾಯ ಮಾಡಿದವರು ಚೆನ್ನಾಗಿ ಮನವರಿಕೆ ಮಾಡಿಕೊಳ್ಳುತ್ತಾರೆ. ಇದು ಕೇವಲ ಶ್ರಮ ಹಾಗೂ ಶ್ರದ್ಧೆಯಿಂದ ಮಾತ್ರ ಸಾಧ್ಯವಾಗುವಂತಹ ಬರೆವಣಿಗೆ. ಪ್ರೊ. ಕಂಬಿಯವರಿಗೆ ಶ್ರದ್ಧೆಯಿದೆ. ಜತೆಗೆ ಶ್ರಮಸಾಧ್ಯವಾದ ಈ ಕಾರ್ಯವನ್ನು ಪ್ರೇಮದಿಂದ ನಿರ್ವಹಿಸಿದ್ದಾರೆ. ಅವರ ಪ್ರಯತ್ನ ಶ್ಲಾಘ್ಯವಾದದ್ದು, ಅಭಿನಂದನೀಯವಾದದ್ದು.

ಹಂಪ ನಾಗರಾಜಯ್ಯ

ನವೆಂಬರ್ 1, 1991
ರಾಜ್ಯೋತ್ಸವದ ಶುಭಗಳಿಗೆ.

# ಲೇಖಕರ ಮಾತು

'ನಿಗಮಾಗಮ ಮತ್ತು ವಚನಾಗಮಗಳ ಶ್ರೌತಾಶ್ರೌತ ದೃಷ್ಟಿ' ಎಂಬ ಪ್ರಬಂಧ ಬರೆಯಲು ಪ್ರೇರಣೆ ಡಾ. ರಂಗನಾಥ ದಿವಾಕರರಾಯರ "ವಚನ ಶಾಸ್ತ್ರ ರಹಸ್ಯ" ಎಂಬ ಗ್ರಂಥದಲ್ಲಿ ಅವರು ಪಂಚರಾತ್ರಾಗಮಗಳಲ್ಲಿಯೂ 'ಶ್ರೌತ ಶ್ರೌತ' ಎಂಬ ಭೇದವಿದೆ ಎಂದು ತಿಳಿಸಿದ್ದು. ಅದರಲ್ಲೂ ಶೈವಾಗಮಗಳಲ್ಲಿರುವ ಅಶ್ರೌತ ಭೇದ ದಂಥ ಭೇದವು ಪಂಚರಾತ್ರಾಗಮಗಳಲ್ಲಿಯೂ ಇರುವದೆಂಬುದನ್ನು ತಿಳಿಸುತ್ತ ಆಶ್ಚರ್ಯವನ್ನು ವ್ಯಕ್ತ ಮಾಡಿದ್ದು. ಈ ಬಗ್ಗೆ ತಮ್ಮ ಆತಂಕಕ್ಕೆ ಕಾರಣವನ್ನು ಅವರು ತಿಳಿಸುತ್ತ 'ಅಶ್ರೌತ' ಅಂದರೆ ಅವೈದಿಕ ಎಂಬ ಅರ್ಥವಿರುವದನ್ನು ಕಾರಣವೆಂದು ಬರೆದಿರುತ್ತಾರೆ.

ಅವರಲ್ಲಿ ಉಂಟಾದ ಈ ಆತಂಕಕ್ಕೆ ಪರಿಹಾರವಿದೆ ಎಂಬುದನ್ನು ಶೋಧಿಸಲು ಅವರ ಆತಂಕವೇ ನನ್ನನ್ನು ಈ ಕಾರ್ಯಕ್ಕೆ ಪ್ರೋತ್ಸಾಹಿಸಿತು. ಇದು ಅತ್ಯಂತ ಅವಶ್ಯಕ ವಾದ ಕಾರ್ಯವೆಂದು ಮನಗಂಡ ಲೇಖಕರು ಈ ಕಾರ್ಯವನ್ನು ಕೈಗೆತ್ತಿಕೊಂಡರು. ಈ ಕಾರ್ಯ ಪ್ರಾರಂಭಕ್ಕೆ ಸೂಚನೆಯು ಋಗ್ವೇದ ಮತ್ತು ಉಪನಿಷತ್ತುಗಳಲ್ಲಿ ಇರುವ ದೃಷ್ಟಿಕೋನಗಳಲ್ಲಿ ದೊರೆಯಿತು. ತತ್ತ್ವಜ್ಞಾನದ ವಿದ್ಯಾರ್ಥಿಯಾದ ಇವರು Outlines of Indian Philosophy ಎಂಬ ಗ್ರಂಥದಲ್ಲಿ ಮತ್ತು Indian Philosophy vol. I ಓದುತ್ತಿದ್ದಾಗ ಆ ದೃಷ್ಟಿಯನ್ನು ಗುರುತಿಸಿ ದ್ದನ್ನು ಸ್ಮರಿಸಿಕೊಂಡರು. ಪುನಾ ಈ ಎರಡೂ ಗ್ರಂಥಗಳ ಅವಲೋಕನ ಮಾಡಿ ದೃಢಪಡಿಸಿಕೊಂಡರು. ಮೊದಲನೆಯ ಗ್ರಂಥ ಪ್ರೊ. ಎಂ. ಹಿರಿಯಣ್ಣನವರದು. ಅದರಲ್ಲಿ ಋಗ್ವೇದ ಮಂತ್ರಗಳಲ್ಲಿ ವೇದಪರ (ಶ್ರೌತಪರ) ವಿಚಾರ ಮತ್ತು ಅಶ್ರೌತಪರ (ಅವೈದಿಕ ಅಥವಾ ವೇದವಿರೋಧಪರ) ವಿಚಾರವಿರುವದನ್ನು ಎತ್ತಿ ಕೊಂಡು ಅದರ ದಾರಿಯನ್ನು ಹಿಡಿದು ಬೇರೆ ಅನೇಕ ಗ್ರಂಥಗಳ ಅವಲೋಕನ ಮಾಡಿದರು. ಈ ಎರಡೂ ವಿಚಾರ ಧಾರೆಗಳನ್ನು ಋಗ್ವೇದದ ರುದ್ರನಲ್ಲಿ ಗುರುತಿಸಿದರು. ಋಗ್ವೇದದ ರುದ್ರನು ಯಜ್ಞಪತಿಯಾಗಿರುವಂತೆ ಯಜ್ಞ ಭಂಜಕ (ಮಖಾರಿ)ನೂ ಅಹುದು. ಯಜ್ಞಪತಿ ಎಂಬುದು ಶ್ರೌತ ದೃಷ್ಟಿಪರ ವಿಚಾರ ಯಜ್ಞಭಂಜಕ ಎಂಬುದು ಅಶ್ರೌತದೃಷ್ಟಿಪರ ಆಚಾರ ಎಂಬುದು ಗೊತ್ತಾಯಿತು. ರುದ್ರನ ಅನುಯಾಯಿಗಳು ಗಂಗೆವಾಳುಕದಂತೆ ಅಸಂಖ್ಯಾತರು. ಅವರಲ್ಲಿ ಗುಡ್ಡು ಗಾಡಿನ ವಿವಿಧ ಜನಾಂಗಗಳು ವರ್ಣಾಶ್ರಮದ ಶೂದ್ರರಿಂದ ಬ್ರಾಹ್ಮಣರು ಸೇರಿ

ದ್ದಾರೆ. ಇವರು ಶ್ರೌತಾಚಾರದವರೂ ಇರುವಂತೆ ಅಶ್ರೌತ ಆಚಾರದವರೂ ಸೇರಿ ಕೊಂಡಾದವರು. ರುದ್ರನಿಂದ ಬ್ರಹ್ಮನಿಗೆ (ಹಿರಣ್ಯ ಗರ್ಭನಿಗೆ) ಬೋಧಿತವಾದ ನಿಗಮಗಳಲ್ಲಿಯಂತೆ ಆಗಮಗಳಲ್ಲಿಯೂ ಈ ಎರಡು ಅಂದರೆ ಶ್ರೌತ ಮತ್ತು ಅಶ್ರೌತ ದೃಷ್ಟಿಯ ಸಾಹಿತ್ಯ ಅಥವ ವಿಚಾರವಿದೆ.

ಶ್ರೌತ ದೃಷ್ಟಿಯು ತನ್ನದೇ ಆದ ಆಚಾರ ಮತ್ತು ವಿಚಾರ ವ್ಯವಸ್ಥೆಯನ್ನು ಹೊಂದಿರುವಂತೆ, ಅಶ್ರೌತ ದೃಷ್ಟಿಯೂ ತನ್ನದೇ ಆದ ಆಚಾರ ಮತ್ತು ವಿಚಾರ ವ್ಯವಸ್ಥೆಯನ್ನು ಹೊಂದಿರುತ್ತದೆ. ಇವೆರಡು ಪದಗಳಲ್ಲಿ ಅಶ್ರೌತಪರ ವಿಚಾರ ಬೋಧಿಸುವ ಆಂಗ್ಲಭಾಷೆಯ ಪದಗಳೆಂದರೆ Heretie ಮತ್ತು Modern Rationalism ಎಂದು ಅನುಕ್ರಮವಾಗಿ ಪ್ರೊ. ಎಂ. ಹಿರಿಯಣ್ಣ ಮತ್ತು ಡಾ. ಎಸ್. ರಾಧಾಕೃಷ್ಣನ್ ತಿಳಿಸುತ್ತಾರೆ.

ಉಪನಿಷತ್ತುಗಳಲ್ಲಿರುವ ಅಶ್ರೌತ ದೃಷ್ಟಿಯಂತೆ ವಚನಾಗಮದಲ್ಲಿ ಅಶ್ರೌತ ದೃಷ್ಟಿ ಇದೆ. ಉಪನಿಷತ್ತಿನ ಅಶ್ರೌತದೃಷ್ಟಿಯಿಂದ ಸ್ಫೂರ್ತಿಪಡೆದ ಬುದ್ಧನದೇ ಒಂದು ಪ್ರಕಾರ. ವಚನಾಗಮವು ಬುದ್ಧನಿಗಿಂತ ಉಗ್ರ ಮತ್ತು ಕ್ರಾಂತಿಕಾರಕ.

ಭಾರತದ ಸಾಂಸ್ಕೃತಿಕ ಚರಿತ್ರೆಗೆ ಹೊಸ ಹೊಸ ತಿರುವುಗಳು ಅಶ್ರೌತದೃಷ್ಟಿಯಿಂದ ಮಾತ್ರ. ಇದನ್ನು ಈ ಗ್ರಂಥವು ಎತ್ತಿ ತೋರಿಸಿದೆ. ಈ ದೃಷ್ಟಿ ಅವೈದಿಕಕ್ಕಿರುವ ಹೀನಾರ್ಥದಿಂದ ಭಿನ್ನವಾದ, ವೈದಿಕಕ್ಕೆ ವಿರುದ್ಧವಾದ ಅರ್ಥಚ್ಛಾಯೆ ಕೊಡುವದು. ಈ ದೃಷ್ಟಿಯ ಚರಿತ್ರೆಯಲ್ಲಿಯ ಮುಖ್ಯ ಘಟ್ಟಗಳ ಉಲ್ಲೇಖವನ್ನು ಕೂಡ ಈ ಗ್ರಂಥದಲ್ಲಿ ನೋಡಬಹುದು.

ಋಗ್ವೇದದಿಂದ ಪ್ರಾರಂಭವಾದ ಅಶ್ರೌತದೃಷ್ಟಿಯ ಪ್ರವಾಹವು ಬ್ರಾಹ್ಮಣ ಉಪನಿಷತ್ತು, ಆಗಮ, ಭಗವದ್ಗೀತೆ ಮತ್ತು ವಚನಾಗಮಗಳಲ್ಲಿ ವಿವಿಧ ಕಾರ್ಯ ಕೈಕೊಂಡುದನ್ನು ನೋಡುತ್ತೇವೆ. ವಚನಕಾರರ ನಂತರ ಆಧುನಿಕ ಭಾರತದಲ್ಲಿ ಮ. ಗಾಂಧಿಯವರು ಸುಪ್ರಸಿದ್ಧರು. ಅದೇ ರೀತಿ ಜೆ. ಕೃಷ್ಣಮೂರ್ತಿ ಕೂಡ ವಚನಕಾರರಂತೆ ತೀವ್ರ ಉಗ್ರವಾದಿಗಳು. ಹೀಗೆ ಈ ಪಂಪರೆಯ ಸಜೀವತೆ ಗೊತ್ತಾಗುತ್ತದೆ. ಈ ಕಾರ್ಯ ಯಶಸ್ಸಿಗೆ ಹರಸಿದ ಷ॥ಬ್ರ॥ಶ್ರೀ ಹೋಟೆಶ್ವರ ಮಹಾಸ್ವಾಮಿ ವಂದ್ಯರು. ಅವರ ಕರುಣೆಗಾಗಿ ಸದಾಸ್ಮರಿಸುವೆ. ಅವರು ಕೂಡ ಈ ಪರಂಪರೆಯ ವಿಚಾರವಾದಿಗಳಾಗಿ ಬದುಕಿದವರು.

ಈ ಪ್ರಬಂಧಕ್ಕೆ ಆಶೀರ್ವಾದ ಕಳಸಿದ ಸಿದ್ಧಪುರುಷರಾದ ಷ॥ಬ್ರ॥ಶ್ರೀ ಶ್ರೀ ಶ್ರೀ ಸಿದ್ಧಲಿಂಗಾರಾಧ್ಯ ಮಹಾಸ್ವಾಮಿಗಳು ಗವಿಮಠ ಬೆಂಗಳೂರ ಅವರಿಗೆ ನನ್ನ

ಭಕ್ತಿಯ ಪ್ರಣಾಮಗಳು. ಈ ಶ್ರೀಗಳ ಭಕ್ತ ಸಮೂಹವು ನಾಡುನುಡಿಯ ಸಾಂಸ್ಕೃತಿಕ ಸೇವೆಯಲ್ಲಿ ತೊಡಗಿದೆ. ಲಿಂ. ಬೆಡಸೂರ ಪಟ್ಟದೇವರ ಸದ್ಭಕ್ತರಾದ ಶ್ರೀ ಜಾವೂರ ಅವರು ಈ ಸಂಶೋಧನ ಕಾರ್ಯದಲ್ಲಿ ಆಸಕ್ತಿ ತೋರಿಸಿದವರು. ಲಿಂ. ಬೆಟಸೂರ ಪಟ್ಟದ ದೇವರ ಸದ್ಭಕ್ತರಾದ ಇವರು ಅವರಂತೆಯೇ ಪ್ರಗತಿಪರ, ವಿಶಾಲ ವಿಚಾರ ವುಳ್ಳವರು. ಇವರು ನನ್ನ ವಿದ್ಯಾರ್ಥಿ ಸ್ನೇಹಿತರು. ಅವರ ಗುರು ಭಕ್ತಿಯು ಮೆಚ್ಚುವಂತದು. ಅವರಿಗೆ ಧನ್ಯವಾದಗಳು.

ಸಂಸ್ಕೃತ ಸಾಹಿತ್ಯ ಹಾಗೂ ವಚನಸಾಹಿತ್ಯಗಳಲ್ಲಿ ಕೃಷಿಗೈದ ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಗಳು ಹೊಳಲು ಅವರು ಅಚ್ಚಾದಕರಡು ಪ್ರತಿ ನೋಡಿ ಮೆಚ್ಚಿ ತಮ್ಮ ವಿಚಾರಗಳನ್ನು ತಿಳಿಸುವ ಮೂಲಕ ಶುಭ ಹಾರೈಕೆ ಬರೆದು ಕಳಿಸಿದ ಅವರಿಗೂ ಧನ್ಯವಾದಗಳು. ಮುನ್ನುಡಿಯೆಂದು 'ತುಂಬೆ ಹೂ' ಕಳಿಸಿದ ಸ್ನೇಹಿತರಾದ ಪ್ರೊ ಹಂಪನಾಗರಾಜಯ್ಯ ಅವರಿಗೆ ಕೃತಜ್ಞತೆಗಳು. ಈ ಕೃತಿಯನ್ನು ಹರಪನಹಳ್ಳಿಯ ಷ॥ ಬ್ರ॥ ಶ್ರೀ ಶ್ರೀ ಶ್ರೀ ಚಂದ್ರಮೌಳಿ ಶಿವಾಚಾರ್ಯ ಮಹಾಸ್ವಾಮಿಗಳವರು ಶ್ರೀ ಜಗದ್ಗುರು ರೇಣುಕ ಪ್ರಕಾಶನದ ಪ್ರಥಮ ಪುಷ್ಪವೆಂದು ಪ್ರಕಟಿಸಲು ಅವಕಾಶ ಕಲ್ಪಿಸುವ ಅವರಿಗೆ ಭಕ್ತಿಪೂರ್ವಕ ನಮನಗಳು. ಇಂಥ ಮೌಲಿಕ ಪ್ರೌಢ ಗ್ರಂಥಗಳ ಪ್ರಕಟಣೆಯ ಕಾರ್ಯವನು ಪ್ರಾರಂಭಿಸುವದನ್ನವರು ಪ್ರಕಟಿಸಿದ್ದನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ವಿದ್ಯಾಪ್ರಸರಣ, ಸಮಾಜದ ನಾಡಿನ ಆಧುನೀಕರಣ ಮುಂತಾದ ಮಹಾ ಕಾರ್ಯಗಳ ಮೂಲಕ ನಾಡ ಮತ್ತು ರಾಷ್ಟ್ರ ಸೇವೆಯಲ್ಲಿ ತೊಡಗಿದ ಅವರು ವೀರಶೈವ ಮಠಗಳ ಪಾರಂಪರಿಕ ಕಾರ್ಯ ಮುಂದು ವರಿಸಿದುದು ಶ್ಲಾಘನೀಯ. ಇದಕ್ಕಾಗಿ ಅವರು ವಂದ್ಯರು. ಈ ಗ್ರಂಥದ ಉಪ ಯುಕ್ತತೆ ಹೆಚ್ಚಿಸಲು ಶ್ರೀ ಟಿ. ಎಲ್. ಬ್ಯಾಡಗಿಯವರು ಗ್ರಂಥ ಸೂಚಿ ಸಿದ್ಧ ಗೊಳಿಸಿ ಉಪಕರಿಸುವ ಅವರಿಗೆ ನಮನಗಳು.

ಈ ಸಂಶೋಧನೆಯನ್ನು ಹೊರತರುವಲ್ಲಿ ಭಾಗಿಗಳಾದ ಶಾರದಾ ಪ್ರಿಂಟಿಂಗ್ ಪ್ರೆಸ್ ಮಾಲಕರಿಗೆ ಮತ್ತು ಕಾರ್ಯಕರ್ತರಿಗೆ ಧನ್ಯವಾದಗಳು. ಗ್ರಂಥದಲ್ಲಿ ಅಚ್ಚಿನ ದೋಷಗಳಿಲ್ಲದಿಲ್ಲ. ಇದನ್ನು ಓದುಗರು ಸಹಿಸಲು ಬಿನ್ನವಿಸಿಕೊಳ್ಳದಿರಲಾಗದು.

———

# ನಿಗಮಾಗಮ ಮತ್ತು ವಚನಾಗಮಗಳ ಶ್ರೌತಾ ಶ್ರೌತ ದೃಷ್ಟಿ

## ಪರಿವಿಡಿ

# ನಿಗಮಾಗಮ ಮತ್ತು ವಚನಾಗಮಗಳ ಶ್ರೌತಾಶ್ರೌತ ದೃಷ್ಟಿ

**ಪ್ರವೇಶ :-**

ಪುರಾಣ ಹಿಂದೂಧರ್ಮದ ಸಂಶೋಧನೆಯಲ್ಲಿ ತೊಡಗಿದ ಪ್ರಾಚ್ಯವಿಜ್ಞಾನ (Indology) ಕೋವಿದರು ಅದರ ಪ್ರಾಚೀನ ವ್ಯವಸ್ಥೆಯನ್ನು ಬ್ರಾಹ್ಮಣಧರ್ಮ ಅಥವ ಬ್ರಾಹ್ಮಣಧರ್ಮವಾದ (Brahmanism) ಎಂದು ಗುರುತಿಸಿದರು. ಈ ಹೆಸರಿನ ಧರ್ಮವು ಎರಡು ಅವಸ್ಥೆಗಳ ಚರಿತ್ರಾತ್ಮಕವಾಗಿದೆ. (೧) ಮುಖ್ಯವಾಗಿಗುಣ ವಾಚಕ. ಇದು ಅದರ ಪ್ರಥಮ ಚರಿತ್ರಾವಸ್ಥೆ. (೨) ಗೌಣವಾಗಿ ಜಾತಿವಾಚಕ. ಇದು ವರ್ಣಾಶ್ರಮದ ಹೆಚ್ಚು ಪರಿಶುದ್ಧರೂಪ ಬೋಧಕ. ಮೊದಲನೆಯ ಅವಸ್ಥೆಯಲ್ಲಿ ಜಾತಿವಾದದ ಛಾಯೆ ಕೂಡ ಇರುವದಿಲ್ಲ. ಕೇವಲ ಉದ್ಯೋಗ ಬೋಧಕ. ಎರಡನೆಯ ಅವಸ್ಥೆಯಲ್ಲಿ ಜಾತಿಯ ಕರಾಳಛಾಯಾ ಸ್ಪರ್ಶದ ಪ್ರಾರಂಭ. ಈ ಅವಸ್ಥೆಯಲ್ಲಿ ಅಂದರೆ ಉಪನಿಷತ್ಕಾಲದಲ್ಲಿ೧, ಕರ್ಮಮಾರ್ಗ ಮತ್ತು ಜಾತಿವಾದಗಳು ತೀವ್ರ ಪ್ರತಿಸ್ಪಂಧನಕ್ಕೆ ಎಡೆ ಮಾಡಿಕೊಟ್ಟವು. ಈ ಮುನಿಧರ್ಮದಲ್ಲಿ ಮುನಿದವರಲ್ಲಿ ಕೆಲವು ಮುನಿಗಳು ಈ ಧರ್ಮದಿಂದ ಸಿಡಿದು ಹೋದರು. ಅಂಥವರಲ್ಲಿ ಸುಪ್ರಸಿದ್ಧ ರಾದವರೆಂದರೆ ಗೌತಮ ಬುದ್ಧ, ಮೊದಲಾದವರು. ಉಪನಿಷತ್ ಯುಗದ ಅಂತ್ಯ ಕಾಲದಲ್ಲಿ ಈ ಪ್ರತಿಸ್ಪಂಧನದ ತೀವ್ರತೆ ಕಂಡು ಬರುತ್ತದೆ.

ಬೌದ್ಧ ಮತ್ತು ಜೈನ ಧರ್ಮಗಳು ಪ್ರಬಲವಾಗುತ್ತಿದ್ದಂತೆಯೆ ಭಾರತದ ಮೇಲೆ ಪರಕೀಯರ ಪ್ರಭಾವ ತನ್ನ ಮುದ್ರೆಯನೊತ್ತತೊಡಗಿತು. ಇದು ಎರಡು ಬಗೆಯದಿದೆ. ಒಂದು ಶಾಂತ ಸೌಹಾರ್ದ್ರಯುತ, ಇನ್ನೊಂದು ದಬ್ಬಾಳಿಕೆ, ವೈರ, ಭೀತಿಮಯ. ಮೊದಲನೆಯದರ ಉದಾರಹಣೆಯೆಂದರೆ ದಕ್ಷಿಣ ಭಾರತದ ಕರಾವಳಿಯ ಮಾರ್ಗವಾಗಿ ಯುರೋಪ ಮತ್ತು ಅರಬ ದೇಶಗಳಿಂದ ಬಂದ ಜನರು, ಭಾರತೀಯ ರಂತೆ ವ್ಯಾಪಾರುದ್ಯೋಗದಲ್ಲಿದ್ದವರು. ದಕ್ಷಿಣ ಭಾರತವನ್ನು ಪ್ರವೇಶಿಸ ತೊಡಗಿದ ಇವರ ಬರವಿನಿಂದ ಶಾಂತಮಯವಾದ ಸ್ಪಂದನ ಪ್ರತಿಸ್ಪಂದನಗಳು ಸಾಂಸ್ಕೃತಿಕ ಕ್ಷೇತ್ರದಲ್ಲಿ ಪ್ರಾರಂಭವಾದವು. Prof E. R. Odds emphasises "the oriental background against which Greek culture rose, and from which it was never completely isolated save in

---

೧. ಛಾಂದೋಗ್ಯೋಪನಿಷತ್ತು, ಸತ್ಯಕಾಮನ ಆಖ್ಯಾಯಿಕೆ.

the minds of classical scholars."[೧] ಇಲ್ಲಿ ಭಾರತದ ಮಹತ್ತರ ಶಕ್ತಿಯ ಅರಿವು ಗುರುತಿಸಿದ್ದು ಸಂಸ್ಮರಣೀಯ- John B Chethimattam writes, "India' s unity is the product of her long history by intigration into her life stream of all the cultural elements that into her, Dravidian and Aryan, Greek and Mongol, Turk and Pathan alike"[೨]

ಭಾರತದ ಸಾಂಸ್ಕೃತಿಕ ಸ್ಥಿರತೆಯ ಮರ್ಮ ಕುರಿತು ಅರವಿಂದರು ಹೀಗೆ ಬರೆಯುತ್ತಾರೆ. "One thing seems at any rate certain, that the spiritual motive will be in future of India, as in her past, the real originative and dominating strain."[೪] ಭಾರತಿಯರ ಆರ್ಥಿಕ ನೀತಿ, ಔದ್ಯೋಗಿಕ ವ್ಯವಸ್ಥೆ, ಧಾರ್ಮಿಕ ವ್ಯವಸ್ಥೆಗಳ ಮೇಲೆ ಪ್ರಭಾವ ಬೀರಲು ಪರಕೀಯರವು ಪ್ರಾರಂಭಿಸಿದವು, ಭಾರತೀಯರಲ್ಲಿ ವೈಚಾರಿಕ ಬದಲಾವಣೆಗೆ ನಾಂದಿ ಆಯಿತು. ಆದರೆ ಇದೆಲ್ಲ ಪರಮ ಪುರುಷಾರ್ಥ ಸಿದ್ಧಿಗೆ ಆದೀನವಾಗಿರುವಂತೆ ಭಾರತೀಯ ಮೂಲ ಪ್ರತಿಭೆ ಜಾಗೃತ ವಾಗಿತ್ತು. ಬಾಹ್ಯ ಸಂಘರ್ಷಣೆ ಕ್ರಿ.ಶ.ಪೂ. ಅರೆಸಹಸ್ರ ವರ್ಷಗಳಿಂದಲೂ ಪ್ರಾರಂಭವಾಗಿತ್ತು. ಈ ಸಾಂಸ್ಕೃತಿಕ ಸಂಘರ್ಷಣೆಯಲ್ಲಿ ತನ್ನ ತನವನ್ನು ಉಳಿಸಿಕೊಂಡು ಬರಲು ಅತ್ಯಂತ ಪ್ರಬಲವಾಗಿ ಪ್ರತಿಸ್ಪಂದಿಸಿತು. ಇದರ ಪರಿಣಾಮವೇ ಪುರಾಣ-ಹಿದೂಧರ್ಮ, ಈ ಕಾರ್ಯದಲ್ಲಿ ಪ್ರಾಚೀನ ಶೈವವು ಪುರಾಣ-ಹಿಂದೂಧರ್ಮದ ಪೂರ್ವ ಕಾಲದಿಂದಲೂ ಅತ್ಯಂತ ಪ್ರಬಲ ಅಂಗವಾಗಿದ್ದುಕೊಂಡು ತನ್ನ ತಾತ್ವಿಕ, ಧಾರ್ಮಿಕ, ಉದಾರ ಮತ್ತು ಪ್ರಗತಿಪರ ದೃಷ್ಟಿಕೋನಗಳಿಂದ ಧಾರ್ಮಿಕ, ಚಾರಿತ್ರಿಕ ಪ್ರವಾಹಕ್ಕೆ ಹೊಸ ಹೊಸ ತಿರುವು ಕೊಡುತ್ತಲೇ ಬಂದಿದೆ. ರುದ್ರನ[೫] ಹಾಗು ಕೇಸಿಗಳೆಂಬ ಆತನ ಅನುಯಾಯಿಗಳ ಯೋಗ ಸಾಧನೆ, ಸಿದ್ಧಿಗಳಂತೆ ಆತನ ಭೇಷಜ ಕಾರ್ಯಪ್ರಸಿದ್ಧಿ, ಪ್ರಗತಿಪರ ಪ್ರಜಾಸತ್ತಾತ್ಮಕ ಭಾವದ ಮುಖಂಡತ್ವ, ಬ್ರಾಹ್ಮಣಗಳ ಮಹಾದೇವ, ಪಶುಪತಿಗಳ ನೀತಿ ಸಂರ

---

೨· Jawaharlal Nehru, The Discovery of India, PP129-30 Meridian Books Ltd (1951)

೩. J. B. Chethimattam, ialogue in Indian Tradition,

೪. Sri. Aurovind, The Renaissance in India, PP 44-49 Aryan publieation (1949)

೫. Dr. A. B. Keith. Religion and philosophy of Vedas vol 31. Oxford University. (1927)

೬. Dr. Sampurnananda. Atharva Veda Vratyakanda(Intro) Ganesh&com Madras (1956)

ಕ್ಷಣೆಯ ಕಾರ್ಯ; ಆರ್ಯ ಅನಾರ್ಯ ಭೇದ ಧ್ವಂಸಕಾರ್ಯ, ಉಪನಿಷತ್–ಪ್ರತಿಭೆಯಿಂದ ಯಜ್ಞ ಖಂಡನೆ ಹಾಗೂ ಅತ್ಯಾಶ್ರಮ ಶಿರೋವ್ರತ ಧ್ಯಾನಯೋಗ ಮೊದಲಾದವುಗಳ ಅನುಷ್ಠಾನ ಕಾರ್ಯ, ಮೊದಲಾದವುಗಳಿಂದ ಅತಿ ಪ್ರಾಚೀನ ಭಾರತೀಯ ಧಾರ್ಮಿಕ ಹಾಗೂ ವೈಚಾರಿಕ ಪ್ರವಾಹಕ್ಕೆ ಹೊಸ ಹೊಸ ತಿರುವುಗಳಾದುದನ್ನು ಕಾಣುತ್ತೇವೆ. ಇವೆಲ್ಲ ಧೋರಣೆಗಳ ಪ್ರವಾಹದ ಮಹಾಪೂರವನ್ನು ಆಗಮಗಳಲ್ಲಿ ಕಾಣುತ್ತೇವೆ. ಅದರ ಉಜ್ವಲ ಪ್ರತಿಭಾ ಪ್ರತಿಕ್ರಿಯೆ ಕೆಲವೇ ಕೆಲವು ವಿದ್ವಾಂಸರ ಗಮನವನ್ನಾದರೂ ಸೆಳೆದುದುಂಟು.೭ ಆಗಮಗಳನ್ನು, ಉಪಬ್ರುಂಹಣಗಳನ್ನು, ಸ್ಮೃತಿಗಳನ್ನು, ಪ್ರಕರಣ ಗ್ರಂಥಗಳನ್ನು, ಬ್ರಹ್ಮಸೂತ್ರ ಭಾಷ್ಯಗಳನ್ನು ಈ ದೃಷ್ಟಿಕೋನದಿಂದ ಅಧ್ಯಯನವನ್ನು ಮಾಡಿದರೆ ಈ ಕಾರ್ಯದ ಚರಿತ್ರೆಯ ವಾಸ್ತವ ಚಿತ್ರಣವು ಗೊತ್ತಾಗುವದು; ಭಾರತೀಯ ಸಾಂಸ್ಕೃತಿಕ ಚರಿತ್ರೆಯ ಹೊಸ ಮುಖ ಕಂಡು ಬರುವುದು.

ಬೌದ್ಧ, ಜೈನ ಧರ್ಮಗಳ ಆಕ್ರಮಣ ದಮನ ಮಾಡುವಲ್ಲಿ ಹಾಗೂ ತನ್ನಲ್ಲಿ ತಾನು ಬದಲಾವಣೆಗಳನ್ನು ಉಂಟು ಮಾಡಿಕೊಳ್ಳುವಲ್ಲಿ ಶೈವದ ಕ್ರಾಂತಿಕಾರಕ ಮನೋಧರ್ಮವನ್ನು, ಹಾಗೂ ಅದರ ಚೈತನ್ಯಮಯ ಬದುಕಿನ ರೀತಿಯನ್ನು ಆಗಮಗಳು ತಿಳಿಸುತ್ತವೆ. ಇದರ ಪರಿಣಾಮವೇ ಶೈವ ಧರ್ಮದ ಪ್ರಭೇದಗಳು. ಈ ಕ್ರಾಂತಿಕಾರಿಕ ಮನೋಧರ್ಮದ ದೃಷ್ಟಿ ಆಗಮಗಳ ಒಂದು ಪ್ರಭಾವೀ ಶಕ್ತಿಯಾಗಿ ಸದಾ ಹಸಿರಾಗಿದ್ದರೆ, ಅದರ ಮತ್ತೊಂದು ಕಾರ್ಯ ಶಕ್ತಿಯು ವರ್ಣಾಶ್ರಮ ಧರ್ಮದ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಉಳಿಸಿಕೊಂಡು ಬಂದುದನ್ನು ಅಂದರೆ ಪೂರ್ವಾಚಾರಪರತೆ, ಸಂಪ್ರದಾಯ ಬದ್ಧತೆಗಳ ಶಾಶ್ವತ ಬದುಕಿಗಾಗಿ ಅರ್ಪಿಸಿಕೊಂಡು ಇರುವುದನ್ನು ನೋಡುತ್ತೇವೆ. ಈ ಎರಡೂ ಪ್ರವಾಹಗಳು ಆಗಮಗಳಲ್ಲಿ ಸ್ವಚ್ಛಂದವಾಗಿ ಪ್ರವಹಿಸಿವೆ. ಈ ಎರಡೂ ಶಕ್ತಿ ಪ್ರವಾಹಗಳು ಋಗ್ವೇದದಲ್ಲಿ ಆವಿರ್ಭವಿಸಿ ನಂತರದ ವೈದಿಕ ಚತುರ್ವಿಧ ಸಾಹಿತ್ಯದಲ್ಲಿ ತಮ್ಮ ತಮ್ಮ ಶಕ್ತಿಸಂಗ್ರಹ, ಕಾರ್ಯ ಚಾತುರ್ಯ ಮೆರೆಯುತ್ತ ಮುಂದುವರೆದಿವೆ. ಒಂದು ವೇದ ಕರ್ಮಪರ, ಇನ್ನೊಂದು ವೇದ ಕರ್ಮ ಜಾತಿ ವಿರೋಧಪರ ಈ ಧರ್ಮವು ವೇದಮಯ ಎಂಬುದನ್ನು ಅಥವಾ

೭. "The Agamas served a very important part in mitigating the influence of and finally absorbing Buddhism and Jainism in Hinduism. The Agamas may be rightly held responsible for creating the Hinduism of to day as contrasted with Brahmanism depicted in the Sutras." quoted from Mr. Srinivas Iyengar *by* Dr. S. C. Nandimath in his article the Saivagamas: The Literature and Theology on p. 4 Journal of Karnataka University vol VI (1962)

ಶ್ರುತಿಮಯವೆಂಬುದನ್ನು ಆಗಮಗಳು, ನಂತರದ ಉಪಬೃಂಹಣ, ಸ್ಮೃತಿ, ಸೂತ್ರ ಭಾಷ್ಯಗಳು ತಿಳಿಸುತ್ತವೆ. ಆ ಪ್ರವಾಹಗಳ ನಿರರ್ಗಳತೆ, ಅವಿರಳ ಸಂಬಂಧ ಈ ಸಾಹಿತ್ಯದಲ್ಲಿ ಕಂಡು ಬರುತ್ತದೆ.

ವೇದಾಗಮ ಪುರಾಣಾನಾಂ ಸಾರಭೂತಂ ತವಪ್ರಿಯೆ। ಸೂ.ತಂ. × 57
ಇದಂ ರಹಸ್ಯಂ ಪಾಪಘ್ನ ವೇದಾನಾಂ ಸಾರಮುತ್ತಮಂ। ಸೂಂ.ತಂIII.112
'ಶ್ರೂಯತೇ ಹಿ ವೇದಸಾರಃ–ಶೈವ ಸಿದ್ಧಾಂತ ಪಂಭಾಷೆ : ೮

ವೇದಾಗಮಾಂತ ವಿದಿತಂ ಶಾಂಭವವ್ರತಮಾಚರೇತ್

ಮ ಆ ಕ್ರಿಯಾಪಾದ I-೧

'ಸರ್ವವೇದಾನುಸಾರಿತ್ವಾತ್ ಶೈವತಂತ್ರಂ ವಿಶಿಷ್ಯತೇ–ಶಿ. ಶಿ.
ವಯಂತು ವೇದಶಿವಾಗಮಯೋಃ ಭೇದಂದನ ಪಶ್ಯಾಮಃ–

ಶ್ರೀಕಂಠ ಶಿವಾಚಾರ್ಯ ಬ್ರ. ಸೂ. ಭಾ.

ಪ್ರಮಾಣಮೇಕಂ ತದ್ವಾಕ್ಯಂ ತಥ್ಯಮೀಶ್ವರ ಭಾಷಿತವ್–

ಮತಂಗಪಾರಮೇಶ್ವರಾಗಮ ೪

ಮಹಾತ್ಮಾ ಬಸವಣ್ಣನವರ ವಚನಗಳು ವೇದ ಖಂಡನ ಮತ್ತು ವೇದ ಪ್ರಾಮಾಣ್ಯಪರವಾದ ವಿಚಾರ ಪ್ರವಾಹಗಳನ್ನು ಪ್ರತಿಪಾದಿಸುತ್ತವೆ. ೮

1. 'ವೇದ ಸ್ವಯಂಭು' ವೆಂಬ ವಾದಿ ನೀ ಕೇಳೆಲವೊ ಏಕೋ ದೇವ ರುದ್ರನ ೯ ದ್ವಿತೀಯನೆಂದು ನಂಬುವುದು.....ಜಗದಕರ್ತ ಕೂಡಲಸಂಗಮದೇವನೊಬ್ಬನೆ ಕಾಣಿರಣ್ಣಾ ಬ. ವ. ೩೧.
2. ವೇದ ವೇಧಿಸಲರಿಯದೆ ಅಭೇದ್ಯಲಿಂಗವೆಂದು ನಡುನಡುಗಿತ್ತು..... ಬವ. ೯೫೨.

---

೮) ರಂ. ಶಾ. ದಿವಾಕರ, ವಚನ ಶಾಸ್ತ್ರ ರಹಸ್ಯ, ಪು ೧೭೨–೧೭೩ ಮೂರುಸಾವಿರ ಮಠ ( ೯೬೮).

೯ ಎಸ್. ಎಸ್. ಬಸವನಾಳ (ಸಂ). ಬಸವಣ್ಣನವರ ವಚನಗಳು ಎಲ್. ಇ. ಅಸೋಸಿಯೇಶನ್ ಧಾರವಾಡ (೧೯೬೨) The great Basava preached the doctrine of the Agamas and thus there was theirl revival in the Karnataka. see S. D. Pavate. Veershaiva Philoso phy of the Shaivagamas. p. 6. Hubli (1927).

3. ವೇದ ನಡು ನಡುಗಿತ್ತು.... ಬ. ವ. ೭೪೯.

4. ವೇದಕ್ಕೆ ಒರೆಯ ಕಟ್ಟುವೆ....

5. ವೇದ ಘನವೆಂಬೆನೆ ಪ್ರಾಣವಧೆ ಹೇಳುತ್ತಿದೆ....

6. .....ಶ್ರುತಿಗಳು ನಾಲ್ಕು ವೇದವೂ ಹುಸಿಯದೆ 'ಭರ್ಗೋದೇವಸ್ಯಧೀಮಹಿ' ಎಂದುದಾಗಿ ಕೂಡಲಸಂಗಮನಲ್ಲದಿಲ್ಲೆಂದಿತ್ತು ವೇದ.

ಈ ಪ್ರಥಮ ೨ ರಿಂದ ೫ ರವರೆಗಿನ ವಚನಗಳಲ್ಲಿ ವೇದ ಖಂಡನವನ್ನು ಮಾಡಿದರೆ, ಪರಶಿವನಲ್ಲದೆ ಇನ್ನು ದೇವರು ಇಲ್ಲವೆಂದು ದೇವರ ಸದ್ಭಾವ ಏಕೇಶ್ವರವಾದ ಪ್ರತಿಪಾದನೆ ಮಾಡುತ್ತವೆ. ಇದು ಅನುಕ್ರಮವಾಗಿ ಶ್ರೌತ ಮತ್ತು ಅಶ್ರೌತವಾದವಾಗಿರುತ್ತದೆ. ಇದು ವಚನಾಗಮದ ಪ್ರಣಾಲಿ: ಸ್ವತಂತ್ರ ಪ್ರಣಾಲಿ. ಇದು ಈ ಪ್ರಬಂಧ ವಿಷಯವನ್ನು ಅರ್ಥೈಸಿಕೊಳ್ಳಲು ಸಿದ್ಧಗೊಳಿಸುತ್ತದೆ.

## I. ಆಕಾರ ಸಾಹಿತ್ಯ ಸಮೀಕ್ಷಾ ಸ್ಥಲ :-

ಪ್ರಸ್ತುತ ಪ್ರಬಂಧದ ಆಕಾರ ಸಾಹಿತ್ಯ ವೆಂದರೆ ದಿವ್ಯಾಗಮಗಳು, ಶಿವ ಪುರಾಣಗಳು, ಸೂತ್ರಗಳು, ಬ್ರಹ್ಮಸೂತ್ರ ಭಾಷ್ಯಗಳು, ಆಗಮ ಭಾಷ್ಯಗಳು. ಇವುಗಳ ಜೊತೆಗೆ ಆಧುನಿಕ ಅನೇಕ ವಿದ್ವಾಂಸರು ಈ ಪ್ರಾಚೀನ ಸಾಹಿತ್ಯದ ಅಧ್ಯಯನ ಸಂಶೋಧನೆ ಕೈಕೊಂಡು ಬರೆದ ಕೃತಿಗಳು (ಲೇಖನಗಳು ಮತ್ತು ಗ್ರಂಥಗಳು). ಪ್ರಸ್ತುತ ವಿಷಯವು ಅನೇಕ ಪ್ರಬಂಧಗಳ ವಸ್ತುವಾಗಬಲ್ಲುದು. ಆದರೆ ಪ್ರಬಂಧಕಾರರು ತಮ್ಮ ಇತಿಮಿತಿಗಳನ್ನರಿತುಕೊಂಡು ತಮ್ಮ ಕಾರ್ಯವನ್ನು ಕೇವಲ ಪರಿಚಯಕ್ಕೆ ಸೀಮಿತಗೊಳಿಸಿಕೊಂಡಿದ್ದಾರೆ. ಈ ಪ್ರಬಂಧಕ್ಕೆ ಬಳಸಿಕೊಳ್ಳಲಾದ ಆಕಾರ ಸಾಹಿತ್ಯವು ಕೂಡ ಲಭ್ಯವಿರುವ ಒಂದೆರಡು ಆಗಮ ಭಾಗಗಳು.

### ಆಗಮಗಳ ಕಾಲ :

ಆಗಮ ಎಂದಾಗ ಶೈವ ಆಗಮಗಳೆಂದೇ ಅರ್ಥ. ಯಾಕಂದರೆ ಆಗಮ ಶಬ್ದದ ಅರ್ಥ ವ್ಯಾಪ್ತಿಯಲ್ಲಿ ವೈಷ್ಣವ ಆಗಮಗಳು, ಶಾಕ್ತಾಗಮಗಳು, ಅಲ್ಲದೆ ವೇದ ಸಾಹಿತ್ಯಕ್ಕೂ ಸಹಿತ ಆಗಮವೆಂದು ಹೇಳುವದನ್ನು ದಿವಾಕರ ರಂಗರಾಯರು ವಚನ ಶಾಸ್ತ್ರ ರಹಸ್ಯ ಗ್ರಂಥದಲ್ಲಿ ಬರೆದಿದ್ದಾರೆ. ಇದು ಆಸ್ತಿಕ ಸಾಹಿತ್ಯದ ಮಾತಾಯಿತು. ನಾಸ್ತಿಕ ಸಾಹಿತ್ಯದಲ್ಲಿ ಕೂಡ ಬೌದ್ಧಾಗಮ, ಜೈನಾಗಮಗಳೂ ಉಂಟು. ಆಗಮ ಶಬ್ದದ ಅರ್ಥ ವ್ಯಾಪ್ತಿಯಲ್ಲಿ ಇವು ಕೂಡ ಸೇರಿಕೊಳ್ಳುತ್ತವೆ.ಆ ದ್ದರಿಂದ ಇಲ್ಲಿ ಆಗಮಗಳು ಎಂದರೆ ಶೈವಾಗಮಗಳು ಎಂದು ಸೀಮಿತಾರ್ಥದಲ್ಲಿ ಬಳಸಿದೆಯೆಂಬುದನ್ನು ಸ್ಪಷ್ಟಪಡಿಸಬೇಕಾಗಿದೆ. ಶೈವಾಗಮಗಳನ್ನು ದಿವ್ಯಾಗಮಗಳೆಂದು ಕರೆವ ರೂಢಿ, ಇವು

ಕಾಮಿಕಾದಿ ವಾತುಲಾಂತ ೨೮ ಆಗಮಗಳೆಂದು ಸುಪ್ರಸಿದ್ಧ. ಆಗಮಗಳೆಂದಾಗ ಅವು ಗಳಕಾಲದ ವಿಚಾರವು ಗಣನೆಗೆ ತಗೆದುಕೊಳ್ಳಬೇಕಾದ ವಿಚಾರಗಳಲ್ಲಿ ಒಂದು. ಇದು ಪ್ರಬಂಧಕಾರನ ಕಾರ್ಯ ಕ್ಷೇತ್ರವಲ್ಲ. ಸಂಸ್ಕೃತ ಸಾಹಿತ್ಯ ಚರಿತ್ರಕಾರರು ಮಾಡುವ ಕೆಲಸ. ಆಗಲೆ ಅನೇಕ ಸಂಸ್ಕೃತ ಸಾಹಿತ್ಯ ವಿದ್ವಾಂಸರು ಈ ಕಾರ್ಯಕ್ಷೇತ್ರದಲ್ಲಿ ಕೆಲಸ ಮಾಡಿದವರಿದ್ದಾರೆ. ಇವರ ನಿರ್ಣಯಗಳು ಗ್ರಾಹ್ಯವೆಂದು ಹೇಳಬೇಕಾಗಿಲ್ಲ. ಒಂದು ವೇಳೆ ಇವರ ನಿರ್ಣಯಗಳು ಅಗ್ರಾಹ್ಯವೆನ್ನುವದಾದರೆ ಅವರು ಬಳಸಿಕೊಂಡ ಸಾಕ್ಷ್ಯಾಧಾರಗಳನ್ನು ಅಲ್ಲಗಳೆದು ಸಿದ್ಧಮಾಡಬೇಕು. ಪ್ರಸ್ತುತ ಲೇಖಕರಿಗೆ ಇದು ಗ್ರಾಹ್ಯ ವಿಲ್ಲ. ಈಗಾಗಲೆ ಕಾಲನಿರ್ಣಯ ಮಾಡಲಾಗಿದೆ. ಹೆಚ್ಚಿನ ಸಾಕ್ಷ್ಯಾಧಾರಗಳು ಲಭ್ಯವಾದಲ್ಲಿ ಸಧ್ಯದ ಕಾಲನಿರ್ಣಯದ ಮರು ಪರಿಶೀಲನೆಯು ನಡೆಯಲೇಬೇಕು.

ಆಗಮಗಳ ಕಾಲನಿರ್ಣಯವನ್ನು ಮಾಡಿದವರಲ್ಲಿ ಕರ್ನಾಟಕದ ಕೆಲ ವಿದ್ವಾಂಸರು ಇದ್ದಾರೆ. ಈ ಕಾರ್ಯ ಮಾಡಿದ ವಿದ್ವಾಂಸರಲ್ಲಿ ಕೆಲ ಹೆಸರುಗಳು ಇಂತಿವೆ. ಸಿದ್ಧರಾಮಪ್ಪ ಪಾವಟೆ, ಪ್ರೊ. ಎಂ. ಆರ್. ಸಾಖರೆ, ಡಾ. ಎಸ್. ಸಿ. ನಂದಿಮಠ, ಶ್ರೀ ಶಂಭುಲಿಂಗ ಶಿವಾಚಾರ್ಯರು, ರಂ. ರಾ. ದಿವಾಕರ, ಎಂ. ಜಿ. ನಂಜುಂಡಾರಾಧ್ಯ, ಡಾ. ಎಚ್. ಪಿ. ಮಲ್ಲೇದೇವರು, ಡಾ. ಪಿ. ಜಿ. ಹಳಕಟ್ಟಿ, ಕಾಶೀನಾಥ ಶಾಸ್ತ್ರಿ, ಮೊದಲಾದವರು. ಇವರೆಲ್ಲರು ಪ್ರಾಚೀನ ಸಂಸ್ಕೃತ ಶಾಸ್ತ್ರ ಸಾಹಿತ್ಯ, ಪುರಾಣೇತಿಹಾಸ ಮತ್ತು ಶಾಸನಗಳನ್ನು ಈ ಕಾರ್ಯದಲ್ಲಿ ಬಳಸಿಕೊಂಡಿದ್ದಾರೆ. ಆಗಮಗಳ ಕಾಲನಿರ್ಣಯ ಕಾರ್ಯದಲ್ಲಿ ಬಳಸಿಕೊಂಡ ಅತ್ಯಂತ ಪಾಚೀನ ಸಂಸ್ಕೃತ ಸಾಹಿತ್ಯ ಕೃತಿ ಅಂದರೆ ಮಹಾಭಾರತ.[೧೦] ಶಾಸನಗಳಲ್ಲಿ ಅತ್ಯಂತಪಾಚೀನ ಶಾಸನವೆಂದರೆ[೧೧] ಕಂಚಿ ಕೈಲಾಸನಾಥನ ಗುಡಿಯಲ್ಲಿಯದು. ಈ ಶಾಸನದಲ್ಲಿ ೨೮ ದಿವ್ಯಾಗಮಂಗಳ ಉಲ್ಲೇಖವಿರುವದು. ಆಗಮ ಸಾಹಿತ್ಯವು ವೇದದಷ್ಟು ಪುರಾತನ ವೆಂದು ಹೇಳುವವರೂ ಇದ್ದಾರೆ ಆಗಮಗಳ 'ಗುರುಕ್ರಮ ಕ್ಷಿಪದ್ಧತಿ'ಗನುಸರಿಸಿದ. ಆಗಮ ತಜ್ಞರು

---

೧೦. ಯಾನೀಹಾಗಮ ಶಾಸ್ತ್ರಾಣಿಯಾಶ್ಚ ಕಾಶ್ಚಿತ್ ಪ್ರವೃತ್ತಯ ಃ। ತಾನಿವೇದಂ ಪುರಸ್ಕೃತ್ಯ ಪ್ರವೃತ್ತಾನಿ ಯಥಾಕ್ರಮಂ.......ತತ್ರಗತ್ವಾಧಿಂ ಜ್ಞಾತ್ವಾದೀಕ್ಷಾಂ ಕುರ್ಯಾದ್ಯಥಾಗಮಂ। ಮಹಾಭಾರತ ಅನುಶಾಸನ ಪರ್ವ ೧೪೫ ಹಾಗೂ ೨೦೭ ನೆಯ ಅಧ್ಯಾಯಗಳಲ್ಲಿಯ ಪಧ್ಯಗಳು. ಬಳಸಿಕೊಂಡ ಗ್ರಂಥ-ಆಗಮ ಪರಿಜ್ಞಾನ ಪು.೫೦ ಲೇಖಕ, ಶ್ರೀ ಶಂಭುಲಿಂಗ ಶಿವಾಚಾರ್ಯರು ಬೃಹನ್ಮಠ ವಿಜಾಪುರ, ಪಂಚಾಚಾರ್ಯ ಪ್ರೆಸ್ (೧೯೩೦).

೧೧ Dr. S. Radhakrishnan, Indilosopby Vol. II George Allen and Unwin.

ಆಗಮಗಳು ಕ್ರಿ.ಶ.ಪೂ. ಸೃಷ್ಟಿಗೊಂಡಿದ್ದು, ಅನೇಕ ಸಲ ಅವುಗಳ ಸಂಗ್ರಹ ಕಾರ್ಯ ನಡೆದುದನ್ನು ಆಗಮ ಶ್ಲೋಕಗಳಿಂದ ತಿಳಿಸುತ್ತಾರೆ.[೧೨]

ಇಂದು ಲಭ್ಯವಿರುವ ಆಗಮ ವಿಭಾಗಗಳು ಈ ಮಾತಿಗೆ ಸಾಕ್ಷಿಯನ್ನು ಒದಗಿಸುತ್ತವೆ. ಅವುಗಳ ಪ್ರಾಚೀನತೆಗಾಗಿ ವಸ್ತುವನ್ನೊದಗಿಸುವಂತೆ. ಆಗಮಗಳು ೨ ಸಾವಿರ ವರ್ಷಗಳ ಹಿಂದನವಾದರೂ ಇದ್ದಿರಬೇಕೆಂದು ರಂ. ರಾ. ದಿವಾಕರರು ಬರೆಯುತ್ತಾರೆ.[೧೩]

**ಆಗಮ ಸಾಹಿತ್ಯ ಶಿಲ್ಪ ;**

ಯಾವುದೇ ಶಾಸ್ತ್ರ ಸಾಹಿತ್ಯದ ಅಥವಾ ಮತ ಧರ್ಮ ಸಾಹಿತ್ಯದ ರೂಪುರೇಷೆ ಅಥವಾ ಶಿಲ್ಪವು ಅಲ್ಲಿಯ ಆಚಾರ ವಿಚಾರಗಳಿಗೆ ಅನುಸರಿಸಿ ಸಿದ್ಧಗೊಂಡಿರುತ್ತವೆ ಅಥವಾ ಮೈದಾಳಿರುತ್ತವೆ. ಜೀವನದ ರೂಪೂರೇಷೆ (ಶಿಲ್ಪ) ಜೀವನ ಸತ್ವದಂತೆ ರೂಪುಗೊಂಡಿರುತ್ತದೆ ಎಂಬುದು ಇದಕ್ಕೆ ಉತ್ತಮ ಉದಾಹರಣೆ. ಇದು ಕೇವಲ ಮಾನವ ಬದುಕಿಗೆ ಸೀಮಿತವೇನಲ್ಲ. ಪ್ರಾಣಿ ಪ್ರಪಂಚಕ್ಕೂ ಈ ಮಾತು ಅನ್ವಯಿಸುತ್ತದೆ. ಉದಾ. ವಿಕಾಸ ಸಿದ್ಧಾಂತ (Theory of Evolution) What you wish to be that you are. ಋಗ್ವೇದದ ಮಂತ್ರದಲ್ಲಿ– ನಾಸದೀಯ ಸೂಕ್ತದಲ್ಲಿಯ–

"That One, a void inchaos wrapt, by inward fervour grew within it first arose desire, the primal germ of mind." Rgv X 129. ಪ್ರಥಮ ಅಭೀಪ್ಸೆ (ಕಾಮ)ಯ ಸಿದ್ಧಾಂತವನ್ನೆ ಆಧುನಿಕ ಜೀವ ವಿಜ್ಞಾನ (Biology)ವು ಪ್ರತಿ ಪಾದಿಸುವದು. ಮಾನವನ ದೇಹ ಮತ್ತು ವಿಚಾರಗಳು ಅವನ ಅಭೀಪ್ಸೆ ಪೂರೈಸಲು ರೂಪು ರೇಷೆ ಪಡೆದಿರುತ್ತವೆ. ಮಾನವ ಪ್ರಾಣಿಯ ಅಭೀಪ್ಸೆಯ ವೈವಿಧ್ಯ ರೂಪುಗಳಿಗನುಗುಣವಾಗಿ ಆತನು ಸಾಹಿತ್ಯಕ್ಕೆ ಒಂದು ಸ್ವರೂಪ ಕೊಟ್ಟುದೇ ಅದರ ಶಿಲ್ಪ:

ವೇದ ಸಾಹಿತ್ಯದ ಶಿಲ್ಪವು ವೈದಿಕಯುಗದ ಮಾನವನ ಬದುಕಿನ ಶಿಲ್ಪಕ್ಕನುಗುಣವಾಗಿರುತ್ತದೆ–ಆತನ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ತ, ಮತ್ತು ಸನ್ಯಾಸ ಆಶ್ರಮ

---

೧೨. Dr. S.C. Nandimath. The Saivagamas : Their Literature and Theology. pp. 31-33 Journal of Karnataka University vol VI. (1962)

೧೩. ರಂ.ರಾ. ದಿವಾಕರ. ವಚನ ಶಾಸ್ತ್ರ ರಹಸ್ಯ ಪು. ೨೮೯ ಮೂರು ಸಾವಿರ ಮಠ ಹುಬ್ಬಳ್ಳಿ (೧೯೬೮).

ಗಳಿಗನುಗುಣವಾಗಿ, ಅಂದರೆ ಅವುಗಳ ಅವಶ್ಯಕತೆಗಳನ್ನು ಪೂರೈಸಲು–ಮಂತ್ರ, ಬ್ರಾಹ್ಮಣ, ಅರಣ್ಯಕ, ಹಾಗೂ ಉಪನಿಷತ್ ಸಾಹಿತ್ಯ ಪ್ರಕಾರಗಳು ರೂಪುಗೊಂಡಿವೆ. ನಾಲ್ಕು ಬಗೆಯ ಆಶ್ರಮಗಳಿಗೆ ಸಾಹಿತ್ಯವೂ ನಾಲ್ಕು ಪ್ರಕಾರವಾಗಿರುತ್ತದೆ. ಇವು ವ್ಯಷ್ಟಿಬ್ರಹ್ಮ, ಸಮಷ್ಟಿ ಬ್ರಹ್ಮವಾಗಿ ಮಾನವ ಕುಲವು ರೂಪುಗೊಳ್ಳಲು ಪ್ರೇರಣಾ ಶಕ್ತಿಯಾಗಿ ಕಾರ್ಯ ಮಾಡುತ್ತವೆ. ಇದು ಇಡೀ ಮಾನವ ಜನಾಂಗಕ್ಕೆ ಕಡ್ಡಾಯ ವೆಂದೇನಲ್ಲ. ಆಸ್ತಿಕ ಭಾರತೀಯ ಸಮಾಜಕ್ಕೆ ಅನ್ವಯಿಸುವ ವಿಚಾರವಷ್ಟೆ. ಇದು ವೈದಿಕ ಸಾಹಿತ್ಯ ಶಿಲ್ಪ ವಿಚಾರ. ವೈದಿಕ ಸಾಹಿತ್ಯದಲ್ಲಿಯ ಈ ನಾಲ್ಕು ಪಾದಗಳಲ್ಲಿ ಧರ್ಮ ಚಿಂತನ ಮತ್ತು ತತ್ವ ಚಿಂತನಗಳಿರುವುದನ್ನು ನೋಡುತ್ತೇವೆ. ಧರ್ಮ ಚಿಂತನವು ಯಜ್ಞಯಾಗಾದಿ ಕರ್ಮಗಳ ಆಚರಣೆಯ ಆಳವಾದ ವಿಚಾರ ಚಿಂತನವಾದರೆ, ತತ್ತ್ವ ಚಿಂತನವು ಆತ್ಮಾದಿ ವಿವಿಧ ವಸ್ತು ಜನನದ, ಅವುಗಳ ಸ್ವರೂಪಗಳ ವಿವೇಕವಾಗಿರುತ್ತದೆ. ಇದೇ ಕರ್ಮಕಾಂಡ ಮತ್ತು ಜ್ಞಾನಕಾಂಡಗಳೆಂದು ಪ್ರಸಿದ್ಧ ವಾದಂಥವು. ಕರ್ಮಕಾಂಡವು ಪ್ರಥಮ ಮೂರು ಆಶ್ರಮಗಳ ಸಾಹಿತ್ಯವಾದರೆ; ಜ್ಞಾನಕಾಂಡವು ನಾಲ್ಕನೆಯ ಆಶ್ರಮದ ಸಾಹಿತ್ಯ. ಕರ್ಮ ಕಾಂಡವು ಫಲ ಪ್ರವರ್ಧಕ; ಸಂಸಾರ ಮೂಲ. ಜ್ಞಾನಕಾಂಡವು ಮುಕ್ತಿಮೂಲ. ಇವೇ ಪ್ರವೃತ್ತಿ ಮತ್ತು ನಿವೃತ್ತಿ ಸಾಹಿತ್ಯಗಳೆಂದೂ ಕರೆಯಲಪಟ್ಟವೆ. ಮೊದಲನೆಯದು ಬಹಿರ್ವೃತ್ತಿ ಸಾಹಿತ್ಯ. ಎರಡನೆಯದು ಅಂತರ ವೃತ್ತಿ ಸಾಹಿತ್ಯ. ಇದನ್ನೇ ಸಮಾಧಿ ಸಾಹಿತ್ಯ ವೆಂದು ಕರೆಯುವರು.

ಈ ಸಾಹಿತ್ಯ ಶಿಲ್ಪವನ್ನೇ ಆಗಮ ಸಾಹಿತ್ಯವು ಬಳುವಳಿಯಾಗಿ ಪಡೆದಿದೆ. ಇದು ಕೂಡ ವೇದದಂತೆ ಅದೇಕೆ ಅದಕ್ಕಿಂತಲೂ ವಿಪುಲವಾಗಿ ಬೆಳೆದ ಸಾಹಿತ್ಯರಾಶಿ. ಇದರ ವಿಪುಲತೆಯ ಇಣುಕು ನೋಟ ಪಡೆಯಲು ಮತಂಗ ಪಾರಮೇಶ್ವರಾಗಮ [೧೪] ನೋಡಬೇಕು.

ಚತುಷ್ಪಾದಮಿದಂ ಶಾಸ್ತ್ರಂ........ ॥ ೩೦ ॥
ಅನುಷ್ಟುಪ್‌ಚ್ಛನ್ದಸಾ ಪೂರ್ವಂ ನಿಬದ್ಧಂಕೋಟಿ ಸಂಖ್ಯಯಾ ।

ಅನುಷ್ಟುಪ್ ಚ್ಛಂದಸಿನಲ್ಲಿ ಬರೆಯಲ್ಪಟ್ಟ ಚತುಷ್ಪಾದ ರೂಪದ ಆಗಮ ಶಾಸ್ತ್ರ ಸಾಹಿತ್ಯವು ಕೋಟಿಸಂಖ್ಯೆ ಶ್ಲೋಕಗಳಿಂದ ಕೂಡಿದೆ ಎಂಬುದು ಮತಂಗ ಪಾರಮೇಶ್ವ ರಾಗಮದ ಅಭಿಪ್ರಾಯ. ಈ ಶ್ಲೋಕವು ಆಗಮ ಸಾಹಿತ್ಯದ ವಿಪುಲತೆಯನ್ನು ತಿಳಿಸು ವಂತೆ ಸಾಹಿತ್ಯ ಶಿಲ್ಪವನ್ನು ಕೂಡ ತಿಳಿಸಿದೆ. ಆಗಮ ಸಾಹಿತ್ಯವನ್ನು ಚತುಷ್ಪಾದ

೧೪ ಶ್ರೀ ಶಂಭುಲಿಂಗ ಶಿವಾಚಾರ್ಯರು ; ಬೃಹನ್ಮಠ, ಆಗಮ ಪರಿಜ್ಞಾನ, ಪು. ೮೦–೮೧ ಪಂಚಾಚಾರ್ಯ ಪ್ರೆಸ್ (೧೯೩೦).

ಸಾಹಿತ್ಯವೆಂದು ಆಗಮವೇ ಲಕ್ಷಣಿಸಿದೆಯೆಂಬುದು ಗಮನಾರ್ಹ ವಿಚಾರ. "ವಿದ್ಯೇಶ್ವರರು ಮೊದಲಾಗಿ ಮುನಿಗಳವರೆಗೆ ಆಯಾ ಕಾಲಗಳಲ್ಲಿ ಆಗಮ ವಾಕ್ಯಗಳ ಸಂಖೆಯು ಸಂಕೋಚವನ್ನು ಹೊಂದಿರುವುದಾಗಿ ತಿಳಿದು ಬಂದರೂ, ಈಶ್ವರೋಪದಿಷ್ಟವಾದ ಜ್ಞಾನಾದಿ ಷಟ್‌ಪದಾರ್ಥಗಳೆಂಬ ವಿಷಯಗಳ ನಿರೂಪಣೆಯಾದರೋ ಲೇಶವಾದರೂ ಸಂಕೋಚವನ್ನೈದುದಿಲ್ಲವಾದುದರಿಂದ, ಈಗ ದೊರೆವ ಆಗಮ ವಾಙ್ಮಯದಲ್ಲಿ ಸಾಮ್ನಾಯದ (ಈಶ್ವರೋಪದಿಷ್ಟ ಜ್ಞಾನದ) ನ್ಯೂನತೆಯಿರುವದಿಲ್ಲ."೧೫

ಈ ಮಾತುಗಳು ಆಗಮ ಸಾಹಿತ್ಯದ ವಿಪುಲತೆ, ಸಂಕ್ಷಿಪ್ತತೆ ಮತ್ತು ಶಿಲ್ಪದ ಪರಿಚಯ ಮಾಡಿಕೊಡುತ್ತವೆ. ಅಧ್ಯಯನಶೀಲರಿಗೆ ಇವು ಮಾರ್ಗದರ್ಶಿಯಾಗಿವೆ.

**ಚತುಷ್ಪಾದಗಳ ಪರಾಮರ್ಶೆ :**

ಆಗಮದ ಚತುಷ್ಪಾದಗಳ ವಿಚಾರಗಳನ್ನು ತಿಳಿದುಕೊಳ್ಳುವದು ಅವಶ್ಯವಿದೆ. ಈ ಚತುಷ್ಪಾದಗಳ ವಿಚಾರಗಳನ್ನು ಆಗಮಗಳು ತಿಳಿಸುತ್ತವೆ; ಆಧುನಿಕ ಮತ್ತು ಪ್ರಾಚೀನ ವಿದ್ವಾಂಸರೂ ತಿಳಿಸುತ್ತಾರೆ. ಪಾರಮೇಶ್ವರ೧೬ ತಂತ್ರವು ತಿಳಿಸುವುದು ಇಂತಿದೆ-

[A] ಜ್ಞಾನಂ ಕ್ರಿಯಾಚ ಚರ್ಯಾಚ ಯೋಗ ಶ್ಚೇತಿ ನಗಾತ್ಮಜೇ ॥೪೬॥
ಚತುಷ್ಪಥಃ ಸಮಾಖ್ಯಾತಃ ಶಿವಧರ್ಮಃ ಸನಾತನಃ ।
ಪಶು ಪಾಶ ಪತಿ ಜ್ಞಾನಮಿತ್ಯಭಿಧೀಯತೇ ॥೪೭॥
ಷಡಧ್ವ ಶುದ್ಧಿರ್ವಿಧಿನಾ ಕ್ರಿಯೋಚ್ಯತೇ ।
ವೀರಶೈವ ಪ್ರಯುಕ್ತಸ್ಯ ಶಿವೇನ ವಿಹಿತಸ್ಯ ಚ ॥೪೮॥
ಲಿಂಗಾರ್ಚದೇಃ ಸ್ವಧರ್ಮಸ್ಯ ಚರ್ಯಾ ಚರ್ಯೇತಿ ಕಥ್ಯತೇ ।
ತದುಕ್ತೇನೈವ ಮಾರ್ಗೇಣ ಶಿವಸುಸ್ಥಿತ ಚೇತಸಃ ॥೪೯॥
ವೃತ್ಯಂತರ ನಿರೋಧೋಽಯಂ ಸ ಯೋಗ ಇತಿ ಕಥ್ಯತೇ ।

ಸನಾತನವಾದ ಈ ಶಿವಧರ್ಮವು ಜ್ಞಾನ ಕ್ರಿಯಾ ಚರ್ಯಾ ಯೋಗ ಎಂದು ನಾಲ್ಕು ಪಥಗಳುಳ್ಳದು. ಈ ನಾಲ್ಕು ಪಥಗಳನ್ನೆ ನಾಲ್ಕು ಪಾದಗಳೆಂದು ಕರೆದದ್ದು.

---

೧೫. ಶ್ರೀ ಶಂಭುಲಿಂಗ ಶಿವಾಚಾರ್ಯರು ಬೃಹನ್ಮಠ, ಆಗಮ ಪರಿಜ್ಞಾನ. ಪು. ೮೦-೮೬; ಪಂಚಾಚಾರ್ಯ ಪ್ರೆಸ್ (೧೯೩೦).

೧೬. ತಂತ್ರ ಸಂಗ್ರಹ, ಪಾರಮೇಶ್ವರ ತಂತ್ರ ಪು ೧೨. ಶ್ಲೋ. ೪೬-೫೦ ಮೂರು ಸಾವಿರ ಮಠ ಹುಬ್ಬಳ್ಳಿ (೧೯೧೪).

ಇಲ್ಲಿ ಈ ನಾಲ್ಕು ಪಥಗಳು (ಪಾದಗಳು) ಅನುಕ್ರಮವಾಗಿ ಬಾರದೆ ವಿಕಲ್ಪ ರೀತಿಯಲ್ಲಿ ಬಂದಿವೆ. ಮೊದಲು ಜ್ಞಾನ ಪಾದದ ವಿವರಣೆ ಬರುತ್ತದೆ. ಪಶು, ಪಾಶ ಪತಿ ಈ ಮೂರರ ಜ್ಞಾನವೇ ಜ್ಞಾನಪಥ ಅಥವಾ ಜ್ಞಾನಪಾದವಾಗಿದೆ. ಗುರೂಪದೇಶದ ಪ್ರಯುಕ್ತ ಆಗುವ ಷಡಧ್ವ ಶುದ್ಧಿಯ ವಿಚಾರವೆ ಕ್ರಿಯಾಪಾದವಾಗಿದೆ. ಶಿವನಿಂದ ವಿರಶೈವನಿಗಾಗಿ ಹೇಳಿದಂಥ ಲಿಂಗಾರ್ಚನ ರೂಪವಾದ ಸ್ವಧರ್ಮಾಚಾರವೇ ಚರ್ಯಾಪಾದವಾಗಿದೆ. ಅಲ್ಲಿ ಹೇಳಿದಂತೆ ಶಿವನಲ್ಲಿ ಚಿತ್ತವು ವ್ಯತ್ಯಂತರವಾಗದಂತಿರುವದೇ ಯೋಗಪಥ ಅಥವ ಯೋಗಪಾದವಾಗಿದೆ. ಇವೆಲ್ಲ ಚತುಷ್ಪಾದಗಳ ಲಕ್ಷಣಗಳಾಗಿವೆ. ಇಲ್ಲಿ ಹೇಳಿದುದರ ವೈಶಿಷ್ಟ್ಯವನ್ನು ಇನ್ನು ಮೇಲೆ ತಿಳಿದುಕೊಳ್ಳುವ ಚತುಷ್ಪಥದ ಲಕ್ಷಣವನ್ನರಿತಾಗ ಸಾಧ್ಯವಾಗುತ್ತದೆ. ಇದು ತನ್ನದೇ ಆದಂಥ ಒಂದು ವರ್ಗವಾಗಿ ವ್ಯಕ್ತವಾಗಿದೆ. ಅಧ್ಯಯನದ ಅನಕೂಲತೆಗಾಗಿ ಪಾರಮೇಶ್ವರಾಗಮದ ಈ ವೃತ್ತಾಂತವನ್ನು 'ಅ' ಎಂಬ ಸಂಜ್ಞೆಯಿಂದ ಕರೆಯುವಾ.

ಈಗ ಡಾ.ಎಸ್.ಸಿ. ನಂದಿಮಠ ಅವರು ಈ ಚತುಷ್ಪಾದ ಕುರಿತು ಹೀಗೆ ಬರೆಯುತಾರೆ.[೧೭]

(i) **Kriyapada,** dealing with making of objects required for worship. It comprises everything connected with the construction of temples and images.

(ii) **Caryapada,** dealing with the observance of religious rules and practices such as daily rites, rules of varnasramadharma etc.

(iii) **Yogapada,** dealing with breath control, method of concentration, etc., and

(iv) **Jnanapada,** dealing with philosophy.

ಇದು ನಿಜಗುಣ ಶಿವಯೋಗಿಗಳಾದಿಯಾಗಿ ಹಲವು ವಿದ್ವಾಂಸರು ತಿಳಿಸಿದಂತೆಯೇ ಇರುತ್ತದೆ. ಆಗಮದ ಚತುಷ್ಪಾದಗಳನ್ನು ಕುರಿತು ಇಲ್ಲಿ ಬಂದ ಲಕ್ಷಣಗಳು ಪಾರಮೇಶ್ವರಾಗಮದಲ್ಲಿ ಬಂದ ಲಕ್ಷಣಗಳಿಂದ ಭಿನ್ನವಾಗಿರುವುದು ಕಂಡು ಬರುತ್ತದೆ. ಅದರಲ್ಲಿರುವ ಭಿನ್ನತೆ ಕ್ರಿಯಾಪಾದ ಮತ್ತು ಚರ್ಯಾಪಾದಗಳಲ್ಲಿ ಕಂಡು ಬರುವದು. ನಿಜಗುಣರು, ಡಾ. ನಂದಿಮಠ ಎಸ್. ಸಿ. ತಿಳಿಸಿದ ಲಕ್ಷಣಗಳನ್ನು

---

೧೭ ತಂತ್ರ ಸಂಗ್ರಹ, ಪಾರಮೇಶ್ವರ ತಂತ್ರ. ಪು ೧೨.ಶ್ಲೋ.೪೯-೫೦ ಮೂರುಸಾವಿರಮಠ ಹುಬ್ಬಳ್ಳಿ. (೧೯೮೪)

ಒಂದು ಗುಂಪು ಎಂದು ಬಗೆದು,ಅದನ್ನು 'ಬ' ಎಂಬ ಸಂಕೇತದಿಂದ ಗುರುತಿಸೋಣ. ಇದೆಲ್ಲ ಅಧ್ಯಯನದ ಸೌಕರ್ಯಕ್ಕಾಗಿ.

ಇವೆರಡರಿಂದಲೂ ಭಿನ್ನವಾದ ವಿಚಾರವನ್ನು ಡಾ. ಟಿ. ಎಂ. ಪಿ. ಮಹದೇವನ್[೧೮] ಎಂಬ ಘನ ವಿದ್ವಾಂಸರು ತಿಳಿಸುವರು.

1) Charya which consists of external acts of worship like cleaning the temples, gathering flowers for the Deity, etc., this is the path of servant (**dasamarga**), which leads to residence in the realm of God (**Salokya**); **(2)Kriyapada**, which is characterised by act of intimate service of God, such as those that a son may render to his sire; hence this is called the path of son (**Satputramarga**), whose goal is to be attaining the nearness of God (**samipya**) (3) **Yogapada** which stands for contemplating and internal worship; this is the path of friend (**sakhyamarga**), whose aim is gaining the form of God (**sarupya**); (4) Jnana (**marga**), which means knowledge or wisdom, the path of supreme good, (**sanmarga**), whose fruit is the ultimate end which is the final union with God (**Sayujya**) ಈ ವಿದ್ವಾಂಸರು ತಿಳಿಸಿದ ಲಕ್ಷಣಗಳನ್ನು 'ಕ' ಎಂಬ ಸಂಜ್ಞೆಯಿಂದ ಗರುತಿಸುವಾ. ಇನ್ನು ಈ ಮೂರು ಬಗೆಯ ಲಕ್ಷಣಗಳಿಂದ ಭಿನ್ನವಾದ ಲಕ್ಷಣವನ್ನು ದೊರೆಯು ರಂಗಸ್ವಾಮಿ ಪಿಳ್ಳೆ ಎಂಬ ತಮಿಳ ವಿದ್ವಾಂಸರು ಪೆರಿಯ ಪುರಾಣದ ಆಳವಾದ ಅಧ್ಯಯನ ಮಾಡಿದವರು ತೇವಾರಂ ಗ್ರಂಥದ ೧೧೨೨ ನೆಯ ಪುಟದಲ್ಲಿ ಬರೆದುದು ಇಂತಿದೆ :

It is important to note that in everyone of these four further stages making in all sixteen—Carya in Carya Kriya in Carya, Yoga in Carya, and Jnana in Carya........ These are described as the rising rungs of ladder. Carya

---

**೧೮. T.M. P. Mahahadevan. The Saints of India. Bhavans Books' University.**

Kriya and Yoga are included under the name of sadhana ritual. ಈ ಲಕ್ಷಣದ ರೀತಿಯೇ ಬೇರೆ, ಇವರದೇ ಒಂದು ವರ್ಗ.

ಇಲ್ಲಿ ಸಂಜ್ಞೆಗಳನ್ನು ಬಳಸಿ ಬೇರ್ಪಡಿಸಿದ ಲಕ್ಷಣ ವರ್ಗಗಳು ಆಗಮ ಸಾಹಿತ್ಯ ಶಿಲ್ಪದ ವೈವಿಧ್ಯತೆಯನ್ನು ತೋರಿಸುತ್ತವೆ. ಸಧ್ಯದಲ್ಲಿ ಇಷ್ಟೇ ಹೇಳಿದ್ದು ಸಾಕು. ಈ ಪ್ರಬಂಧದ ಬೆಳವಣಿಗೆಯ ಬೇರೆಹಂತಗಳಲ್ಲಿ ಇವುಗಳ ಮೀಮಾಂಸೆಯನ್ನು ಮಾಡಲಾಗುವುದು.

**ಆಗಮ ಭೇದಗಳು :**

ಆಗಮಿಕ ಚತುಷ್ಪಾದ ಸಾಹಿತ್ಯವನ್ನು ಕರ್ಮ (ಕ್ರಿಯಾ) ಮಾರ್ಗ ಸಾಹಿತ್ಯ ಮತ್ತು ಜ್ಞಾನಮಾರ್ಗ ಸಾಹಿತ್ಯವೆಂದು ಶ್ರುತಿ ಸಾಹಿತ್ಯ ಭೇದದಂತೆ ಭೇದವನ್ನು ಆಗಮ ವಿಶಾರದರು ತಿಳಿಸುತ್ತಾರೆ. ಇವೇ ಅನುಕ್ರಮವಾಗಿ ಧರ್ಮಶಾಸ್ತ್ರ ಮತ್ತು ತತ್ತ್ವಶಾಸ್ತ್ರಗಳಾಗಿರುತ್ತವೆ. ಧರ್ಮಶಾಸ್ತ್ರದಲ್ಲಿ ಮೊದಲಿನ ಮೂರು ಪಾದಗಳು ಸೇರಿದರೆ, ತತ್ತ್ವ ಶಾಸ್ತ್ರದಲ್ಲಿ ಕೊನೆಯ ಪಾದವು ಸೇರುತ್ತದೆ. ಇದೊಂದು ರೀತಿಯ ಆಗಮ ಸಾಹಿತ್ಯವ್ಯವಸ್ಥೆ.

೧) ಆಗಮ ಸಾಹಿತ್ಯದಲ್ಲಿ ೧) ಶಿವಾಗಮ, ಮತ್ತು ೨) ರುದ್ರಾಗಮಗಳೆಂದು ಎರಡು ಭೇದಗಳಿವೆ. ಅನೇಕ ಪ್ರಾಚೀನ ವಿಶಾರದರು ಇವುಗಳನ್ನು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿದ್ದಾರೆ. ನಿಜಗುಣ ಶಿವಯೋಗಿಗಳು ವಿವೇಕ ಚಿಂತಾಮಣಿ ಎಂಬ ಗ್ರಂಥದಲ್ಲಿ ಬರೆದುದು ಇಂತು ಇರುತ್ತದೆ-"ಕಾಮಿಕಾದಿ ಸುಪ್ರಭೇದಾಂತಮಾದ ಹತ್ತಾಗಮಂಗಳೇ ಶಿವಭೇದವೆನಿಸಿಕೊಂಬವು. ಮಿಕ್ಕ ವಿಜಯಾದಿ ವಾತುಲಾಂತಮಾದ ಹದಿನೆಂಟಾಗಮಂಗಳೇ ರುದ್ರಭೇದವೆನಿಸಿಕೊಳ್ಳುತ್ತಿರ್ಕುಂ." ಈ ಮಾತುಗಳು ವಿವೇಕ ಚಿಂತಾಮಣಿಯ ಆಗಮ ಪಾದದಲ್ಲಿ ಪ್ರತಿಪಾದವಾಗಿರುತ್ತವೆ. ಇವರಂಥ ಇನ್ನೊಬ್ಬ ಆಗಮ ಸಾಹಿತ್ಯ ಮೇಧಾವಿ, ಅಭಿನವಗುಪ್ತರೆಂಬುವರು ಕಾಶ್ಮೀರದವರು. ಮೊದಲನೇಯವರು ಭಾರತದ ದಕ್ಷಿಣದ ತುದಿಯ ರಾಜ್ಯದವರಾದರೆ, ಎರಡನೆಯುವರು ಭಾರತದ ಉತ್ತರ ತುದಿಯ ರಾಜ್ಯದವರು. ಇವರಿಬ್ಬರು ಹೇಳಿದ ವಿಚಾರ ಕಾಲಗಳಲ್ಲಿಯೂ ಅಂತರ. ಆದರೆ ತಿಳಿಸಿದ ವಿಚಾರವು ಆಗಮೋಕ್ತವಾಗಿ ಒಂದೇ ಇದ್ದು ಆಗಮ ಸಾಹಿತ್ಯವು ವಿದ್ಯಾವಂತರ ಪ್ರಪಂಚದಲ್ಲಿ ಪ್ರೀತಿಯದಾಗಿತ್ತೆಂದು ತೋರಿಸುತ್ತದೆ. ಇದು ಆಗಮ ಸಾಹಿತ್ಯದ ಪ್ರಸರಣ ಮತ್ತು ಏಕರೂಪತೆಗಳಿಗೆ ಸಾಕ್ಷಿ. ಅಭಿನವ ಗುಪ್ತರು ಸುಪ್ರಸಿದ್ಧ ಮುಖ್ಯ ೨೮ ಆಗಮಗಳಲ್ಲದೆ ಬೇರೆ ೬೪ ಶಿವಾಗಮಗಳನ್ನು ಗುರುತಿಸಿದ್ದಾರೆ. ಅವರು ಈ ೬೪ ಆಗಮಗಳು ಭೈರವಭೇದವೆಂದು ತಿಳಿಸುತ್ತಾರೆ. ಈ ಹೆಚ್ಚುವರಿ ಆಗಮಗಳು ಉಪನಿಷತ್ತುಗಳಲ್ಲಿರುವ ಹೆಚ್ಚುವರಿ ಉಪನಿಷತ್ತುಗಳನ್ನು ನೆನಪಿಗೆತರುತ್ತವೆ.

೨) ಶ್ರೀಶಂಭುಲಿಂಗ ಶಿವಾಚಾರ್ಯರೆಂಬ ಆಧುನಿಕ ಆಗಮ ವಿಶಾರದರು ಆಗಮಗಳ ಆಂತರಿಕ ವಿಚಾರಗಳನ್ನುದ್ಧರಿಸಿ ಆಗಮ ಭೇದದ ಇನ್ನೊಂದು ಸ್ವರೂಪವನ್ನು ತಿಳಿಸುವರು: "ಕಾಮಿಕಾದಿ ಸುಪ್ರಭೇದಾಂತಗಳಾದ ಹತ್ತು ಸಂಹಿತೆಗಳು ಪ್ರಣವನೇ ಮೊದಲಾದ ದಶ ಶಿವರಿಗೆ ಉಪದೇಶಿಸಲ್ಪಟ್ಟವುಗಳಾದ್ದರಿಂದ ಆ ಹತ್ತು ಸಂಹಿತೆಗಳಿಗೆ ಶಿವಸಂಹಿತೆಗಳೆಂದೂ, ವಿಜಯಾದಿ ವಾತುಲಾಂತಗಳಾದ ಹದಿನೆಂಟು ಸಂಹಿತೆಗಳು ಅನಾದಿರುದ್ರನೇ ಮೊದಲಾದ ಹದಿನೆಂಟು ಜನ ರುದ್ರರಿಗೆ ಭೋದಿಸಲ್ಪಟ್ಟವುಗಳಾದ್ದರಿಂದ ರುದ್ರಸಂಹಿತೆಗಳೆಂದೂ ಪ್ರಸಿದ್ಧವಿರುವುದರಿಂದ ಆ ೨೮ ಸಂಹಿತೆಗಳೇ ಹತ್ತು ಶಿವಭೇದಗಳೂ, ಹದಿನೆಂಟು ರುದ್ರ ಭೇದಗಳೂ ಎಂದು ಹೇಳಲ್ಪಡುವವು. ಈ ಭೇದ ಆಧಾರವು ಉಪದೇಶದಕ್ರಮ ಅಥವ ಗುರುಕ್ರಮವೆಂದು ಕಂಡುಬರುತ್ತದೆ. ಈ ಉಪದೇಶದ ಕ್ರಮದ ಹೆಸರುಗಳು ಮಹೌಘಕ್ರಮ ಮತ್ತು ಪ್ರತಿಸಂಹಿತಾಕ್ರಮವೆಂದು.

೩) ಆಗಮ ಭೇದದ ಮತ್ತೊಂದು ವಿಚಾರವನ್ನು ವ್ಯಾಸಕೃತವೆಂದು ಹೆಸರಾದ ಪುರಾಣಗಳು ತಿಳಿಸುತ್ತವೆ.[೧೯] "ವೇದಾಗಮ ಮತ್ತು ಶೈವಧರ್ಮದ ಸಂಬಂಧವನ್ನು ಕುರಿತು ಕೂರ್ಮಪುರಾಣದ ಉತ್ತರ ಭಾಗದಲ್ಲಿ (ಅಧ್ಯಾಯ ೩೮), ಮೋಕ್ಷಾರ್ಥವಾಗಿ ಮೊದಲು ನನ್ನಿಂದ ಶ್ರೌತ ಪಾಶುಪಥವು ಸ್ಥಾಪಿಸಲ್ಪಟ್ಟಿತು. ವೇದ ಪಾರಾಯಣರು ಇದನ್ನಾಚರಿಸಬೇಕು..... ಸನತ್‌ಕುಮಾರ ಸಂಹಿತೆಯಲ್ಲಿ 'ಶ್ರೌತಾಶ್ರೌತ ವಿಭೇದೇನ ದ್ವಿವಿಧಾಸ್ತು ಶಿವಾಗಮಃ' ಎಂದು ವಚನವಿರುವುದು. ಇದು ಅಲ್ಲದೆ ವಾಯುವೀಯ ಸಂಹಿತೆಯ ೨೮ ನೆಯ ವಿಧ್ಯಾಯದಲ್ಲಿಯೂ–

ಶೈವಾಗಮೋಪಿ ದ್ವಿವಿಧಃ ಶ್ರೌತೋಽಶ್ರೌತಶ್ಚ ಸಂಸ್ಮೃತಃ।
ಶ್ರುತಿಸಾರಮಯಃ ಶ್ರೌತಃ ಸ್ವತಂತ್ರಸ್ತ್ವಿತರೋ ಮತಃ॥

ಇಲ್ಲಿ ಉಲ್ಲೇಖವಾಗಿರುವ ಭೇದದ ಸ್ವರೂಪವು ಇಲ್ಲಿಯವರೆಗೆ ಕಂಡ ಭೇದದಿಂದ ಭಿನ್ನವಾದುದಾಗಿದೆ, ಹಾಗೂ ಅತ್ಯಂತ ಮಹತ್ವದ ಭೇದವೂ ಆಗಿದೆ. ಇದು ಆಗಮದ ವೈಚಾರಿಕ ಚರಿತ್ರೆಯ ರಹಸ್ಯವನ್ನೆ ತಿಳಿಸುತ್ತದೆ. ಶೈವದ ಎರಡು ವಿಚಾರ ಮತ್ತು ವಿಚಾರ ಪ್ರವಾಹಗಳನ್ನು ಗುರುತಿಸಿ ತಿಳಿಸುತ್ತದೆ, ಧರ್ಮ ಮತ್ತು ತತ್ವಗಳನ್ನು ಸೂಚ್ಯವಾಗಿ ತಿಳಿಸುತ್ತದೆ. ಶೈವಾಗಮಗಳು ಕರ್ಮಕಾಂಡ ಶ್ರುತಿಯನ್ನು ಅನುಸರಿಸುವಂತೆ, ಅದನ್ನು ನಿಂದಿಸುವ ಮತ್ತು ಅದರಿಂದ ಭಿನ್ನವಾದವುಗಳು ಉಂಟು ಎಂಬುದನ್ನು ವಾಯುವೀಯ ಸಂಹಿತೆಯ ಈ ಶ್ಲೋಕವು ತೋರಿಸುತ್ತದೆ. ಈ ಭೇದವು

---

೧೯. ರಂ. ರಾ. ಧಿವಾಕರ, ವಚನಶಾಸ್ತ್ರ ರಹಸ್ಯ. ಪು. ೧೭೩
ಮೂರುಸಾವಿರ ಮಠ ಹುಬ್ಬಳ್ಳಿ (೧೯೭೮).

ಕೇವಲ ಉಪಬೃಂಹಣೋಕ್ತವೆಂದೇನು ತಿಳಿದು ಕೊಳ್ಳಬೇಕಿಲ್ಲ. ಆಗಮಗಳು ಈ ಭೇದ ಲಕ್ಷಣವನ್ನು ಬಹು ಸ್ಪಷ್ಟವಾಗಿ ತಿಳಿಸುತ್ತವೆ. ವೀರಶೈವ ಸಾಹಿತ್ಯಪರಿಣತೋತ್ತ ಮರು ಮತ್ತು ವೀರಶೈವ ಶಾಸ್ತ್ರ ಪರಂಪರೆಯ ಪ್ರವೀಣರೂ ತಿಳಿಸುವುದುಂಟು. ಇಲಾಳದ ಪಂಡಿತ ಗೌರಿನಾಥ ಶಾಸ್ತ್ರಿಗಳು ಷಟಸ್ಥಲ ಶಾಸ್ತ್ರದ ಉಭಯ ಮಾರ್ಗ ಬೋಧಿನಿ ೧೦ ಎಂಬ ಪುಟ್ಟ ಹೊತ್ತಿಗೆಯಲ್ಲಿ ಶ್ರೌತಾಶ್ರೌತದ ಪರ್ಯಾಯ ಪದಗ ಳನ್ನು ಕೊಟ್ಟಿದ್ದಾರೆ. ಶ್ರೌತಶೈವ ಮತ್ತು ಅಶ್ರೌತ ವೆಂಬ ಪ್ರಯೋಗವು ಶ್ರೀಕರ ಭಾಷ್ಯೋದಾಹೃತ ಶಿವಾಗಮದಲ್ಲಿರುವುದನ್ನು; ವೇದ ವಿರುದ್ಧವೆಂಬುವು ಸೂಕ್ಷ್ಮಾ ಗಮ ಹಾಗೂ ಕ್ರಿಯಾಸಾರೋಕ್ತವಾಗಿರುವುದನ್ನೂ, ಶ್ರೀಕರೋದಾಹೃತ ಲಿಂಗೋಪ ನಿಷತ್ತು ಮತ್ತು ಹಾರೀತಾದಿ ಸ್ಮೃತಿಗಳಲ್ಲಿರುವುದನ್ನು ತಿಳಿಸುತ್ತಾರೆ. ಪ್ರಾಚೀನ ಮತ್ತು ಮುಖ್ಯ ೨೮ ಆಗಮಗಳಲ್ಲಿ ಒಂದಾದ ಚಂದ್ರಜ್ಞಾನಾಗಮವು ಈ ಭೇದ ವನ್ನು ತಿಳಿಸುವುದಲ್ಲವೆ, ಈ ಭೇದಗಳನ್ನು ಕುರಿತು ಮಹತ್ವದ ಹೆಚ್ಚಿನ ವಿಚಾರ ಗಳನ್ನು ತಿಳಿಸುತ್ತದೆ. ಇದು ಗಮನಾರ್ಹ ಸಂಗತಿ. ಶೈವಾಗಮಗಳು ತಿಳಿಸುವ ಈ ಶ್ರೌತಾಶ್ರೌತ ವಿಚಾರದ ಮೂಲವು, ಈ ಎರಡೂ ವೈಚಾರಿಕ ಶಾಸ್ತ್ರ ಸಾಹಿತ್ಯ ರೂಪುತಾಳಿ ತಮ್ಮವೇ ಆದಂಥ ಅಸ್ತಿತ್ವದಿಂದ ಭಾರತೀಯ ಆಸ್ತಿಕ ಪರಂಪರೆಯ ಮೇಲೆ ಅಚ್ಚಳಿಯದಂಥ ಮುದ್ರೆಗಳನ್ನು ಒತ್ತಿರುವುದನ್ನು ಮತ್ತು ಅದಕ್ಕೂ ಆಗಮ ಗಳಿಗೂ ಇರುವ ಸಂಬಂಧವನ್ನು ತಿಳಿದುಕೊಳ್ಳುವುದು ಅವಶ್ಯವಿರುತ್ತದೆ. ಈಗ ಆ ಕಾರ್ಯವನ್ನು ಕೈ ಕೊಳ್ಳಬೇಕು.

**ಶ್ರೌತಾಶ್ರೌತ ಪದಗಳ ಹಸಿಗೆ :**

ಈ ಪ್ರಬಂಧ ಸ್ಪಷ್ಟನೆಯ ಕಾರ್ಯಗಳಲ್ಲಿ ಈ ಪದಗಳ ಅರ್ಥ ತಿಳಿದುಕೊಳ್ಳು ವುದು ಪ್ರಥಮ ಅವಶ್ಯಕತೆ. ಸಂಸ್ಕೃತ ಶಬ್ದಕೋಶವೊಂದರಲ್ಲಿ ಶ್ರೌತವೆಂದರೆ ಶ್ರುತ್ಯುಕ್ತವಾದ, ವೇದದಲ್ಲಿ ಹೇಳಲ್ಪಟ್ಟ, ವೇದ ವಿಹಿತವಾದ ಕಾರ್ಯ ಎಂದರ್ಥಗಳಿವೆ. ಕಿಟೆಲ್ ಕನ್ನಡ ಶಬ್ದಕೋಶದ ಪ್ರಕಾರ–relating or belonging to Veda, prescribde by the Veda, founded on it, sacrificial any observance ordained by the Veda. 'ಶ್ರೌತ'ವೆಂಬ ಪದವು 'ಶ್ರುತಿ' ಎಂಬ ಪದದಿಂದ ನಿಷ್ಪನ್ನವಾಗಿದೆ. ಶ್ರುತಿ ಎಂದರೆ ಯಾವುದೇ ವಸ್ತು–ಸತ್ಯವನ್ನು ಅಥವ ಪ್ರಜ್ಞಾನವನ್ನು ಕಂಡವರು ಹೇಳಿದ ಆಪ್ತವಾಕ್ಯವೆಂದರ್ಥ. ಇಂದ್ರಿಯ ಗಳಿಗಗೋಚರವಾದುದನ್ನು ಕುರಿತು ಉಂಟಾದ ಪರತತ್ತ್ವಜ್ಞಾನ–ಶಬ್ದವೇ ಶ್ರುತಿ. ಶ್ರೋತ್ರದಿಂದ ಅಥವ ಶ್ರೋತ್ರ ಮುಖವಾಗಿ ಬಂದ ಆಪ್ತವಾಕ್ಯವೇ ಶ್ರುತಿ.

---

೧೦. ಪಂ. ರಾ. ಗೌರೀನಾಥ ಶಾಸ್ತ್ರಿಗಳು, ಷಟ್‌ಸ್ಥಲ ಶಾಸ್ತ್ರದ ಉಭಯ ಮಾರ್ಗ ಬೋಧಿನಿ. ಪು. ೪. ಇಲಾಳ (೧೯೫೭).

ಶ್ರೌತಾಗಮವೆಂದರೆ ಶ್ರುತಿಯನ್ನು ವಿವರಿಸಲು, ಆ ದೃಷ್ಟಿಕೋನವನ್ನು ಮನಂಬು ಗುವಂತೆ ತಿಳಿಸಲು ಸೃಷ್ಟಿಗೊಂಡ ಸಾಹಿತ್ಯವೇ ಆಗಮ ಶಾಸ್ತ್ರ. ಇದು ಆಪ್ತವಾಕ್ಯ. ಆಗಮವನ್ನು ಶ್ರುತಿಯೆಂದು ಕರೆವುದುಂಟು. ಶ್ರುತಿಯಲ್ಲಿಯ ಒಂದು ಭಾಗಕ್ಕೆ ವೇದ ಶ್ರುತಿ ಎಂದು ಕರೆಯುವರು. ಇದು ಕರ್ಮಕಾಂಡವೆಂದು ಪ್ರಸಿದ್ಧ. ಶ್ರುತಿಯ ಇನ್ನೊಂದು ಭಾಗವನ್ನು ವೇದಾಂತ ಶ್ರುತಿ ಎಂದು ಹೆಸರಿಸುವರು. ಇದೇ ಜ್ಞಾನ ಕಾಂಡ. ಆದ್ದರಿಂದ 'ಶ್ರುತಿ' ಶಬ್ಧವನ್ನು ವೈದಿಕ ಸಾಹಿತ್ಯಕ್ಕೆ ಬಳಸಿದಾಗ ಕರ್ಮ ಕಾಂಡ (ವೇದಶ್ರುತಿ), ಜ್ಞಾನಕಾಂಡ (ವೇದಾಂತಶ್ರುತಿ) ಎಂಬೆರಡೂ ಅರ್ಥಗಳು ಆ ಪದದ ಅರ್ಥ ವ್ಯಾಪ್ತಿಗೆ ಸೇರಿಕೊಳ್ಳುತ್ತವೆ. ಶ್ರೌತಾಚಾರ ವೆಂದಾಗ ವೈದಿಕಾ ಚಾರವೆಂದು ಅರ್ಥ, ಅಶ್ರೌತ ಆಚಾರವೆಂದರೆ ಅವೈದಿಕ ಆಚಾರವೆಂದು ಅರ್ಥ. ಶ್ರೌತಶಾಸ್ತ್ರವೆನ್ನುವಂತೆ ಶ್ರೌತಾಚಾರವೆಂಬ ಪದ ಪ್ರಯೋಗ ವಿರುವುದು ಕಂಡು ಬರುತ್ತದೆ. ಹೀಗೆ ಶ್ರೌತ ಪದವು ಅಶ್ರೌತ ಪದವು ಜೋಡುಜೋಡಾಗಿ ಬಳಕೆ ಯಾಗುತ್ತ ಬಂದಿವೆ, ಈ ಎರಡರಲ್ಲಿಯ ಒಂದರ ಪ್ರಯೋಗವು ಇನ್ನೊಂದನ್ನು ಸ್ಮರಣೆಗೆ ತರುತ್ತದೆ.

ಈಗ ಅಶ್ರೌತವೆಂದರೆ ಅವೈದಿಕವೆಂಬುದನ್ನು ಕೇಳಿದೊಡನೆ ನಮ್ಮಲ್ಲಿ ಕುತೂ ಹಲವು ಇನ್ನೂ ಕೆರಳುವುದು. ಅದನ್ನರಿತುಕೊಳ್ಳುವ ಹಂಬಲ ಹೆಚ್ಚುವುದು. ಯಾಕಂದರೆ 'ಅವೈದಿಕ'ವೆಂಬ ಪದದ ಅರ್ಥವು ಸುಶ್ರಾವ್ಯವಾಗಿರುವದಿಲ್ಲ; ಮನಸ್ಸನ್ನು ಕದಡುವುದು. ಆದರೆ ರೂಢಿಯಲ್ಲಿರುವ ಹಿನಾರ್ಥವೊಂದೆ ಅಶ್ರೌತದರ್ಥವಿದೆ ಯೆಂದೇನು ಭಾವಿಸಬೇಕಾಗಿಲ್ಲ. ಆದ್ದರಿಂದ ವೈದಿಕ ಅಥವಾ ಶ್ರೌತ ಪದದ ಅರ್ಥ ದಿಂದ ಭಿನ್ನವಾದ ಹಾಗೂ ಅವೈದಿಕ ಅಥವಾ ಅಶ್ರೌತ ಪದಕ್ಕಿರುವ ಹೀನಾರ್ಥದಿಂದ ಭಿನ್ನವಾದ ಒಂದು ಅರ್ಥ ವಿರುವುದು ಉಂಟು. ಅದು ತುಂಬಾ ಅಪರಿಚಿತ. ಈ ಅಪರಿಚಿತಾರ್ಥದ ಪರಿಚಯ ಕಾರ್ಯ ಅವಶ್ಯವೆನಿಸಿದೆ. ಅದನ್ನು ಪರಿಚಯಿಸುವ ಕಾರ್ಯವು ಕೂಡ ಕಠಿಣ ತರವಾದುದೆ ಸೈ. ಶ್ರೌತ್ರವೆಂದರೆ ಕಿವಿಯಿಂದ ಕಿವಿಗೆ ಬಂದು ದೆಂಬ ಅರ್ಥವಿರುವಂತೆ, ಅಶ್ರೌತಕ್ಕೂ ಕಿವಿಯಿಂದ ಕಿವಿಗೆ ಬಂದ ಎಂಬ ಅರ್ಥವಾಗು ತ್ತದೆ. ಇದು ವಿಶೇಷ. ಈ ವಿಶೇಷಾರ್ಥಛಾಯೆಯ ಉಗಮವನ್ನು ಅದರ ಯಾತ್ರೆ ಯನ್ನು ಪರಿಚಯಿಸಿದ ವಿದ್ವಾಂಸರೂ ಇದ್ದಾರೆ, ಅದನ್ನೀಗ ನೋಡೋಣ.

## II ಶ್ರುತಿಯ ಅಶ್ರೌತತೆಯ ಅನ್ವೇಷಣಾಸ್ಥಲ

ಶ್ರುತಿ ಎಂದರೆ ನಾಲ್ಕು ಬಗೆಯ ವೈದಿಕ ಸಾಹಿತ್ಯ ಪ್ರಕಾರಗಳ ಒಟ್ಟು ಎಂದರ್ಥ. ಆದ್ದರಿಂದ ಶ್ರುತಿಯಲ್ಲಿಯ ಅಶ್ರೌತತೆಯ ಚರಿತ್ರೆಯು ಮಂತ್ರ ಸಾಹಿತ್ಯದೊಡನೆಯೆ ಪ್ರಾರಂಭವಾಗುವದು. ಪ್ರೊ. ಎಂ. ಹಿರಿಯಣ್ಣ ಎಂಬುವವರು ಋಗ್ವೇದದಲ್ಲಿರುವ ಅಶ್ರೌತತೆಯ ಅನ್ವೇಷಣೆಯಲ್ಲಿ ತೊಡಗಿದವರಲ್ಲಿ ಒಬ್ಬ ಆಧುನಿಕ ಅಂತಾರಾಷ್ಟ್ರೀಯ

ಖ್ಯಾತಿಯ ವಿದ್ವಾಂಸರು. ಇವರಂಥ ಇನ್ನೊಬ್ಬ ವಿದ್ವಾಂಸರೆಂದರೆ ಡಾ.ಎಸ್.ರಾಧಾಕೃಷ್ಣನ್. ಇವರೀರ್ವರೂ ಸನಾತನ ಆಸ್ತಿಕ ಧರ್ಮದ ಉತ್ತಮ ವರ್ಣ ಪ್ರಸೂತರು. ಪ್ರೊ. ಎಂ.ಹಿರಿಯಣ್ಣ ಹೀಗೆ ಬರೆಯುತ್ತಾರೆ–The fact is that Indian thought exhibites such a development that it does not admit of a rough and ready characterization. Underlying this varied development, there are two divergent currents clearly discernible–one having its source in the Veda and the other, independent of it. One might describe them as orthodox and heterodox respectively, provided we remember that these terms are only relative and that either school may design at the other as heterodox claiming for itself the 'halo of orthodoxy'. The second of these currents is the later, for it commences as a reaction against the first; but it is not much later since it manifests itself quite clearly as shown by references to it even in the Vedic hymns. It appears originally critical and negative, but it begins before long to develop a constructive side which is of great consequecnce in the history of Indian philosophy.೨೧ ಋಗ್ವೇದದಲ್ಲಿಯೆ 'ಶ್ರೌತ' ಮತ್ತು 'ಅಶ್ರೌತ'ತೆಗಳ ಅನ್ವೇಷಣೆಯಲ್ಲಿ ತೊಡಗಿದ ಅವರು ಅವುಗಳ ಅಸ್ತಿತ್ವ ಉಗಮಗಳನ್ನು ಗುರುತಿಸಿ ಭಾರತೀಯ ತತ್ತ್ವಜ್ಞಾನ ಚರಿತ್ರೆಯಲ್ಲಿ ಅವುಗಳ ಪಾತ್ರದ ಮಹತ್ವವೇನೆಂಬುದನ್ನು ಕೂಡ ವ್ಯಕ್ತಗೊಳಿಸಿದ್ದಾರೆ. ಅಶ್ರೌತತೆಯ ಪ್ರಾರಂಭದ ಅವಸ್ಥೆಯನ್ನು 'ವೈದಿಕ ಮುಕ್ತವೈಚಾರಿಕತೆ' (Vedic–free thinking) ಎಂದೆನ್ನುವರು :–

It is perhaps necessary to remind the reader that by 'heretical' we mean nothing more than entagonism to the Vedas, particularly to their sacrificial teaching and the customs and instituitions directly connected with it. ಅವರು ಈ ಅಭಿಪ್ರಾಯ ತಳೆಯಲು ವೇದಮಂತ್ರಗಳೇ ಆಧಾರವೆಂದು ಎತ್ತಿ ತೋರಿಸುವರು;

---

೨೧ ೧೪- Prof. M. Hiriyanna, Outlines of Indian philosophy, p. p 50–51. George Allen and Unwin (1958).

Rgveda II. 12 pointedly refers to current disbelief in the existence and supremacy of Indra and endeavours by recounting his great deeds to convince the unbelievers of his majesty and power." ಇದರಂಥ ಇನ್ನೊಂದು ಋಗ್ವೇದದ ಮಂತ್ರ x. 82. ridicules the votaries of the Veda by describing them as 'selfish prattling priests that go about self deluded.[೨೨]" ವೇದವನ್ನು ಈ ರೀತಿ ನಿಂದಿಸುವವರನ್ನು 'ಬ್ರಹ್ಮದ್ವಿಷ' ಎಂದು ಅಲ್ಲಿ ಹೆಸರಿಸಿದ್ದುಂಟು. ವೇದ ನಿಂದಾ ಕಾರ್ಯವು ಈ ರೀತಿ ನಡೆದು ಅದು ಒಂದು ಸ್ವತಂತ್ರ ಪ್ರಣಾಲಿಯಾಗಿ ಬೆಳೆದುಕೊಂಡು ಹೋಯಿತು. ವೇದದಲ್ಲಿ ಅದರ ಬೆಳವಣಿಗೆಯ ಪ್ರಥಮ ಹಂತವನ್ನು, ಹಾಗೂ ಉಪನಿಷತ್ತಿನಲ್ಲಿ ಅದರ ದ್ವಿತಿಯ ಹಂತವನ್ನು ಕಾಣುತ್ತೇವೆ. ನಂತರ ಅದು ಕೊನೆಯ ಹಂತದಲ್ಲಿ ಬುದ್ಧನಿಗೆ ಜನನವಿತ್ತಿತು. ಬುದ್ಧನದು ಅಶ್ರೌತದ ವಿಪರೀತಾವಸ್ಥೆ ಎಂದು ಹೇಳಬಹುದು. ಇದು ಶ್ರೌತೇತರ ಅಶ್ರೌತತೆಯಾಗಿಬಿಟ್ಟಿತು. ಈ ಭೇದವನ್ನು ಪ್ರೊ. ಎಂ. ಹಿರಿಯಣ್ಣ ಮತ್ತು ಡಾ. ಎಸ್. ರಾಧಾಕೃಷ್ಣನ್ ರಲ್ಲಿ ನೋಡುತ್ತೇವೆ : (೧) ಒಂದು ಶ್ರುತಿಯ ಅಶ್ರೌತತೆ : (೨) ಇನ್ನೊಂದು ಶ್ರುತ್ಯೇತರ ಅಶ್ರೌತತೆ.

ವೇದದಲ್ಲಿಯ 'ಅಶ್ರೌತ'ತೆಯನ್ನು ಗುರುತಿಸಿದ ನಂತರ ಅದರ ಯಾತ್ರೆಯು ಮುಂದುವರೆದಿರುವುದನ್ನು ಕೂಡ ವಿದ್ವಾಂಸರು ಸೂಚಿಸಿರುವುದನ್ನು ನೋಡಬಹುದು. ಡಾ. ಎಸ್. ರಾಧಾಕೃಷ್ಣನ್‌ರು ಉಪನಿಷತ್ತಿನ ಅಶ್ರೌತ (Heretic) ದೃಷ್ಟಿಯನ್ನು ಕುರಿತು ಪ್ರಸ್ತಾಪಿಸುತ್ತಾರೆ— The attitude of the Upanisads is not favourable to the sacredness of the Vedas. Like the rationalistic thinkers of a later day they adopted a double attitude towards Vedic authority.[೨೩] ವೇದದ ಪಾವಿತ್ರ್ಯತೆ ಹಾಗೂ ಅನುಲ್ಲಂಘನೀಯತೆಗಳನ್ನು ಋಗ್ವೇದದ II 12 ರಲ್ಲಿ ಗೇಲಿ ಮಾಡುವಂತೆ, ಅಲಕ್ಷವನ್ನು ಕೂಡ ಮಾಡಿದ್ದುಂಟು; ಅದೇ ರೀತಿ ಆ ದೃಷ್ಟಿ ಕೋನವನ್ನು ಮುಂದುವರಿಸಿದವು. ಡಾ. ಎಸ್. ರಾಧಾಕೃಷ್ಣನ್ ಅವರು ಈ ಉಪನಿಷತ್ತುಗಳು ಎರಡು ರೀತಿಯಿಂದ ನೋಡಿದ್ದನ್ನು ಎತ್ತಿ ತೋರಿಸುವರು. The advance of the Upanisads on the Veda consists in........a protest........ and

---

೨೨ Prof. M. Hiriyanna, Ibid,

೨೩. ' Dr. S. Radhakrishnan, Indian Philosophyvol. ',I

an indifference to the sacredness of the Veda.[೨೪] ವೇದದ ವಿಭೂತಿತ್ವವನ್ನು, ಪ್ರಭುತ್ವವನ್ನು ಪ್ರತಿಭಟಿಸುವಂತೆ; ಅವುಗಳನ್ನು ಉಪೇಕ್ಷೆಯಿಂದ ಕಾಣುವುದೂ ಉಪನಿಷತ್ತುಗಳು ವೇದದ ಮೇಲೆ ಸಾಧಿಸಿದ ಪ್ರಗತಿ ಎಂದೆನ್ನುವರು. ಇಲ್ಲಿ ಉಪನಿಷತ್ತುಗಳ 'ಅಶ್ರೌತ'ತೆಯ ತೀವ್ರತೆಯು ಎದ್ದು ಕಾಣುತ್ತದೆ. ಶ್ರುತಿಯಲ್ಲಿರುವ 'ಶ್ರೌತ' ಮತ್ತು 'ಅಶ್ರೌತ' ಪ್ರಣಾಲಿಗಳೆರಡನ್ನು ನಾವು ಋಗ್ವೇದದ ಮಂತ್ರವೊಂದರಲ್ಲಿಯೇ ಗುರುತಿಸಬಹುದು.

ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನೋ ಅಭಿಶಾಕಶೀತಿ॥ ಋ. ವೇ. ೧. ೧೬೪.೩೦

[ಯಾವಾಗಲೂ ಜೊತೆಯಲ್ಲಿರುವ ಸಖರಾದ ಎರಡು ಪಕ್ಷಿಗಳು ಒಂದೇ ವೃಕ್ಷವನ್ನಾಶ್ರಯಿಸಿಕೊಂಡಿರುತ್ತವೆ. ಅವೆರಡರಲ್ಲಿ ಒಂದು ಸವಿಯಾದ ಹಣ್ಣನ್ನು ತಿನ್ನುತ್ತದೆ. ಇನ್ನೊಂದು ತಿನ್ನದೇ ನೋಡುತ್ತದೆ. ಈ ಸುಂದರವಾದ ಪಕ್ಷಿ ಪ್ರತಿಮೆಯು ವೇದದಲ್ಲಿ ಪುರಾತನ ಕಾಲದಿಂದಲೂ ಶ್ರೌತ ದೃಷ್ಟಿ ಅಶ್ರೌತ ದೃಷ್ಟಿಗಳು ಇರುವ ಚಾರಿತ್ರಿಕ ಅಂಶವನ್ನು ಭೋಧಿಸುತ್ತದೆ. ಈ ಪಕ್ಷಿ ಪ್ರತಿಮೆಯ ಮುದ್ರೆಯನ್ನೊಡೆದರೆ ಹುದುಗಿಕೊಂಡಿರುವ ಆ ದೃಷ್ಟಿದ್ವಯದ ಅಸ್ತಿತ್ವವು ಖಚಿತವಾಗುತ್ತದೆ. ಶ್ರೌತ ಪ್ರಣಾಲಿಯನ್ನು ಮಧುರ ಫಲ ಭೋಗದಲ್ಲಿ ತಲ್ಲೀನವಾಗಿರುವ ಪಕ್ಷಿಯು ತಿಳಿಸುತ್ತದೆ. ಮಧುರ ಫಲಭೋಗವೆಂಬುದೇ ಸ್ವರ್ಗ ಸುಖ. ಸ್ವರ್ಗ ಸುಖವು ವೈದಿಕ ಕರ್ಮ ಫಲವಾಗಿರುತ್ತದೆ. ಕರ್ಮದಿಂದೊದಗಿದ ಸ್ವರ್ಗಸುಖವೆಂಬ ಮಧುರ ಫಲ ಭೋಗದಲ್ಲಿರುವ ಪಕ್ಷಿಯನ್ನು ಎರಡನೆಯ ಪಕ್ಷಿಯು ಅಥವ ಮತ್ತೊಂದು ಜೊತೆಯ ಪಕ್ಷಿಯು ನಿರ್ಲಕ್ಷಭಾವದಿಂದ ಕಾಣುತ್ತ, ಸಂಸಾರ ಚಕ್ರದಲ್ಲಿ ಸಿಲಕುವ ಅದರ ಅರಿವು ಹೀನತೆಯನ್ನು ಕಂಡು ಮೂರ್ಖಂಗೆ ಬುದ್ಧಿಯನು ನೂರ್ಕಾಲು ಪೇಳಿದರೆ ಬೋರ್ಕಲ್ಲ ಮೇಲೆ ಮಳೆ ಸುರಿದಂತೆಂಬ ಭಾವವನ್ನು ಸೂಚಿಸುವಂತಿದೆ ಅದರ ಮೌನ. ಇದು ಅಶ್ರೌತ ದೃಷ್ಟಿಯ ಪ್ರತೀಕವಾಗಿರುತ್ತದೆ. ಫಲಭೋಗವು ತ್ಯಾಜ್ಯವೆಂಬುದರ ಇಂಗಿತ. ಇದು ಅದರ ನಿಶಬ್ದ ಬೋಧೆಯು. ಒಂದೇ ವೇದ ಮಂತ್ರದಲ್ಲಿವೆ ಈ ಎರಡು ಪ್ರಣಾಲಿಗಳ ಪ್ರತೀಕವಾದ ಈ ಎರಡು ಪಕ್ಷಿ ಪ್ರತೀಕ.

**ಉಪನಿಷತ್ತುಗಳ ಅಶ್ರೌತ ದೃಷ್ಟಿ ವಿವೇಕ ;**

ಇಲ್ಲಿಯವರಿಗೆ 'ಶ್ರೌತ' ಮತ್ತು 'ಅಶ್ರೌತ' ಪದಗಳ ಮೀಮಾಂಸೆ ಮಾಡಲಾಯಿತು. ಈ ಎರಡೂ ವಿಚಾರ ಮತ್ತು ಆಚಾರ ಪ್ರಣಾಲಿಗಳ ಉಗಮ ಮತ್ತು ಅವು

೨೪, Dr. S. Radhakrishan. Ibid Vol. I

ಗಳ ಬೆಳವಣಿಗೆಗಳನ್ನು ಕೂಡ ಗುರುತಿಸಲಾಯಿತು. ಶ್ರುತಿಯ ಅಶ್ರೌತತೆ ಮತ್ತು ಶ್ರುತ್ಯೇತರ ಅಶ್ರೌತತೆಗಳು ಅನುಕ್ರಮವಾಗಿ ಉಪನಿಷತ್ತಿನ ಅಶ್ರೌತತೆ ಹಾಗೂ ಬೌದ್ಧ ಮತ್ತು ಜೈನಧರ್ಮಗಳ ಅಶ್ರೌತತೆ ಎಂದು ಗುರುತಿಸಲಾಯಿತು. ಈಗ ಉಪನಿಷತ್ತಿನಲ್ಲಿಯ ಪ್ರಣಾಲಿಯ ಪ್ರಾಬಲ್ಯವನ್ನು ನೋಡಬೇಕು. ಈ ಕಾರ್ಯ ಪ್ರಾರಂಭದ ಪೂರ್ವದಲ್ಲಿ ವೇದವೆಂದರೆ ಚತುರ್ವಿಧವಾದ ಇಡಿಯ ವೈದಿಕ ಸಾಹಿತ್ಯವೆ? ಅಥವ ವೇದ ಶಬ್ದವನ್ನು ಪಾರಿಭಾಷಿಕ ಅರ್ಥದಲ್ಲಿ ಬಳಸಲಾಗಿರುವುದೇ? ಎಂಬುದನ್ನು ಅರಿತುಕೊಳ್ಳಬೇಕು. ವೇದದ ಪರ್ಯಾಯಪದ ತ್ರಯಿ ಎಂದು ಇದೆ : ಋಗ್ವೇದ ಮಂತ್ರ X90-9 ತ್ರಯೀ ಎಂಬುವ ಕರ್ಮಕಾಂಡದ ಪಠ್ಯ. ವೇದ ಭಾಷ್ಯ ಕಾರರಾದ ಸಾಯಣರು ವೇದ ಭಾಷ್ಯ ಭೂಮಿಕೆಯಲ್ಲಿ ಹೀಗೆ ಬರೆಯುತ್ತಾರೆ–

'ಮಂತ್ರ ಬ್ರಾಹ್ಮಣಾತ್ಮಕತ್ವಂ ತಾವದದುಷ್ಟಂ ಲಕ್ಷಣಂ'

ಮಂತ್ರ ಮತ್ತು ಬ್ರಾಹ್ಮಣಗಳ ಶಬ್ದರಾಸಿಯೇ ವೇದದ ಲಕ್ಷಣವಾಗಿರುವುದೆಂದು ಅವರ ಅಭಿಪ್ರಾಯ. ಸಾಯಣರ ಈ ಅಭಿಪ್ರಾಯವು ಯಜ್ಞ ಪರಿಭಾಷಾ ಸೂತ್ರದ ಅಭಿಪ್ರಾಯಕ್ಕೆ ಅನುಗುಣವಾಗಿಯೇ ಇರುತ್ತದೆ.

'ಮಂತ್ರ ಬ್ರಾಹ್ಮಣಯೋರ್ವೇದ ನಾಮಧೇಯಮಿತಿ'೨೫

ಆಪಸ್ತಂಬಋಷಿಗಳ ಸೂತ್ರವಿದು. ಸಾಯಣ ಮತ್ತು ಆಪಸ್ತಂಬ ಋಷಿ ಇವರೀರ್ವರ ಅಭಿಪ್ರಾಯವು ಶಾಸ್ತ್ರಕ್ಕನುಗುಣವಾಗಿಯೇ ಇರುತ್ತದೆ. ಆದ್ದರಿಂದ ಇವು ಸರ್ವರಿಂದ ಮಾನ್ಯತೆ ಪಡೆದಿವೆ. ಈ ವಿವರಣೆಯಿಂದ ವೇದ ಶಬ್ದವು ಸಾಮಾನ್ಯ ಶಬ್ದಾರ್ಥದಲ್ಲಿ ಮತ್ತು ವಿಶೇಷ ಶಬ್ದಾರ್ಥದಲ್ಲಿ ಹೀಗೆ ಎರಡು ಅರ್ಥಗಳಲ್ಲಿ ಬಳಕೆಗೊಂಡಿದೆ ಎಂಬುದು ಕಂಡು ಬರುತ್ತದೆ. ವೇದ ಶಬ್ದದ ಸಾಮಾನ್ಯಾರ್ಥ ವ್ಯಾಪ್ತಿಗೊಳಗಾದ ಉಪನಿಷತ್ ಎಂಬ ವೈದಿಕ ಸಾಹಿತ್ಯ ಪ್ರಭೇದವು ಅದರ ವಿಶೇಷಾರ್ಥ ವ್ಯಾಪ್ತಿಗೆ ಒಳಗಾಗುವದಿಲ್ಲ; 'ವೇದ' ಶಬ್ದದ ವಿಶೇಷಾರ್ಥದ ಪ್ರಕಾರ ಮಂತ್ರ ಮತ್ತು ಬ್ರಾಹ್ಮಣಗಳು ಮಾತ್ರ ವೇದಗಳಾಗಿರುತ್ತವೆ. ಈ ಅರ್ಥದಲ್ಲಿ ವೇದವೆಂಬುದು ತನ್ನದೇ ಆದಂಥ ಕರ್ಮಸಾಧನ ವ್ಯವಸ್ಥೆಯನ್ನು, ಮತ್ತು ಈ ಸಾಧನದಿಂದ ಸಿದ್ಧಗೊಳ್ಳುವ ಫಲಗಳ ವಿವರಣೆಯನ್ನು ಹೊಂದಿರುತ್ತದೆ. ಉಪನಿಷತ್ತುಗಳು ವೇದದಿಂದ ಭಿನ್ನವಾದ ಸಾಧನ ವ್ಯವಸ್ಥೆಯುಳ್ಳವಾಗಿವೆ. ಅವುಗಳ ಸಿದ್ಧಿಯೂ ಬೇರೆಯೇ ಆಗಿದೆ. ಈಗ

---

೨೫. ಟಿ. ಎನ್. ಮಲ್ಲಪ್ಪ ವೀರಶೈವದ ಉಗಮ ಮತ್ತು ಪ್ರಗತಿ

೨೬. Prof. M. Hiriyanna, Outlines of Indian philosophy pp. 50. 51 George Allen & Union. (1958)

ವೇದ (ಶ್ರೌತ) ಶಬ್ದದ ಮತ್ತು ವೇದಾಂತ (ಅಶ್ರೌತ) ಶಬ್ದದ ಅರ್ಥವ್ಯಾಪ್ತಿ ಸಾಧನ, ಹಾಗೂ ಸಿದ್ಧಿಗಳು ಭಿನ್ನ ಭಿನ್ನವೆಂಬುದು ಗೊತ್ತಾಯಿತು.

ಅಶ್ರೌತ ಅಥವ ಉಪನಿಷತ್ತು ಈ ಅರ್ಥದಲ್ಲಿ ವೇದಗಳಲ್ಲ. ಇವೆರಡು ಹೋರಾಟದ ಕಣಕ್ಕಿಳಿದಿರುವುದೂ ಉಂಟು. ಈ ಹೋರಾಟದ ವಿಚಾರವನ್ನು ಹಿಂದೂ ದರ್ಶನ ಸಾರವೆಂಬ ಗ್ರಂಥವು ತಿಳಿಸುತ್ತದೆ— "ಪೂರ್ವಕಾಲದಲ್ಲಿ ವೈದಿಕ ಮತವೂ ಔಪನಿಷದಿಕ ಮತವೂ ಸ್ವತಂತ್ರಗಳಾಗಿ ಮಿಶ್ರವಿಲ್ಲದೆ ಇದ್ದವು. ಆಗ ಪರಸ್ಪರ ನಿಂದಾವಾದಗಳು ಬಹಳವಾಗಿದ್ದವು. ವೇದವಾದರತರು ಕುರುಡರಾಗಿ, ಮೂಢರಾಗಿ, ಕಾಮ ಪರವಶರಾಗಿ, ಸ್ವರ್ಗಕ್ಕಿಂತಲೂ ಬೇರೆಪುರುಷಾರ್ಥವಿಲ್ಲವೆಂದು ವಾದಿಸುತ್ತ, ಮೋಕ್ಷವನ್ನು ನಿಂದಿಸುತ್ತ ನಾಸ್ತಿಕರಾಗಿರುತ್ತಾರೆಂದು ಉಪನಿಷತ್ತು, ಭಗವದ್ಗೀತೆ ಮೊದಲಾದ ಗ್ರಂಥಗಳಲ್ಲಿ ತ್ರಯೀಧರ್ಮವೆಂಬ ಶುದ್ಧ ವೈದಿಕ ಮತವನ್ನು ನಿಂದಿಸಿರುತ್ತದೆ."[೨೭] ವೇದಖಂಡನೆ, ವೇದಗಳ ಕರ್ಮಖಂಡನೆ, ವೇದ ಧರ್ಮದ ವರ್ಣಾಶ್ರಮಖಂಡನೆ ಮಾಡಿದ್ದರಿಂದ ಉಪನಿಷತ್ತುಗಳು ವೇದವಿರೋಧ ಪ್ರಣಾಲಿ ಪ್ರಬೋಧಕವೆಂದು ಹೇಳುವುದು ಕಂಡುಬರುತ್ತದೆ.

### ಅಶ್ರೌತತೆಯ ಸಮೀಕ್ಷೆ :

ತ್ರಯೀಮಾರ್ಗವೂ ಸಂಸಾರಮೂಲ, ವೇದ ಅಜ್ಞಾನ, ಮುಂತಾಗಿ ಪ್ರತಿಪಾದಿಸುವ ಉಪನಿಷತ್ತುಗಳು ಅಶ್ರೌತ ಸಾಹಿತ್ಯ. ವೇದದ ಹಿಂದೆ ಹರಿಯದಿರು ಹರಿಯದಿರು ಎಂಬುದು ಅಶ್ರೌತದ ಸಲಹೆ. ಇದು ವೇದನಿಷೇಧವಾದ.

ಸ ಯ ಏಷೋಽಂತರ್ಹೃದಯ ಆಕಾಶಃ। ತಸ್ಮಿನ್ನಯಂ ಪುರುಷೋ ಮನೋಮಯಃ। ಅಮೃತೋ ಹಿರಣ್ಮಯಃ। ಅಂತರೇಣ ತಾಲುಕೇ।ಯ ಏಷಸ್ತನ ಇವಾವಲಂಬತೇ। ಸೇಂದ್ರಯೋನಿಃ। ಯತ್ರಾಸೌ ಕೇಶಾಂತೋ ವಿವರ್ತತೇ। ವ್ಯಪೋಹ್ಯ ಶೀರ್ಷಕಪಾಲೇ। ಭೂರಿತ್ಯಗ್ನೌ ಪ್ರತಿತಿಷ್ಠತಿ। ಭುವ ಇತಿ ವಾಯೌ। ಸುವರಿತ್ಯಾದಿತ್ಯೇ। ಮಹ ಇತಿ ಬ್ರಹ್ಮಣಿ। ಆಪ್ನೋತಿ ಸ್ವಾರಾಜ್ಯಮ್। ಆಪ್ನೋತಿ ಮನಸಸ್ಪತಿಮ್। ವಾಕ್ಪತಿಶ್ಚಕ್ಷುಷ್ಪತಿಃ। ಶ್ರೋತ್ರಪತಿರ್ವಿಜ್ಞಾನ ಪತಿಃ। ಏತತ್ತತೋ ಭವತಿ। ಆಕಾಶಶರೀರಂ ಬ್ರಹ್ಮ। ಸತ್ಯಾತ್ಮ ಪ್ರಾಣಾರಾಮಂ ಮನ ಆನಂದಮ್। ಶಾಂತಿ ಸಮೃದ್ಧಮಮೃತಮ್ ಇತಿ ಪ್ರಾಚೀನ ಯೋಗ್ಯ ಪಾಸ್ವ॥ ಇತಿ ಷಷ್ಠೋಽನುವಾಕಃ। [ಹೃದಯದ ಒಳಗೆ ಆಕಾಶವಿದೆ, ಅದರಲ್ಲಿ ಮನೋ ಮಯನೂ ಅಮೃತನೂ ಆದ, ಹಿರಣ್ಮಯನೂ ಆದ ಪುರುಷನಿರುವನು. ಎರಡು ತಾಲುಗಳ ನಡುವೆ

---

೨೭. ಮ. ಮ. ಷಂ ರತ್ನಂ ಲಕ್ಷ್ಮೀಪುರಂ ಶ್ರೀನಿವಾಚಾರ್ಯರು. ಹಿಂದೂದರ್ಶನ ಸಾರ. ಪು ೧೨೩. ಮೈಸೂರ ವಿಶ್ವವಿದ್ಯಾಲಯ.

ಸ್ತನದಂತೆ ನೇತಾಡುತ್ತಿರುವ ಕಿರುನಾಲಗೆಯ ಮಧ್ಯದಲ್ಲಿ (ಸುಷುಮ್ನಾ ನಾಡಿಯಿರುವುದು.) ; ಅದು ಕೇಶಗಳು ಇಬ್ಭಾಗವಾಗಿರುವ ಪ್ರದೇಶವನ್ನು ಸೇರಿ ಅಲ್ಲಿಂದ ಶೀರ್ಷಕಪಾಲಗಳನ್ನು ಭೇದಿಸಿಕೊಂಡು ಹೋಗಿರುತ್ತದೆ. ಅದೇ ಬ್ರಹ್ಮಪ್ರಾಪ್ತಿಯ ಮಾರ್ಗ. (ಉಪಾಸಕನು) ಅದರ ಮೂಲಕ ಹೊರಗೆ ಬಂದು ಭುಃ ಎಂಬ ಅಗ್ನಿಯಲ್ಲಿಯೂ,ಭೂವಃ ಎಂಬ ವಾಯುವಿನಲ್ಲಿಯೂ,ಮಃ ಎಂಬ ಬ್ರಹ್ಮದಲ್ಲಿಯೂ ನಿಲ್ಲುವನು. (ಬ್ರಹ್ಮಭೂತನಾಗಿ) ಸ್ವಾರಾಜ್ಯವನ್ನು ಹೊಂದುತ್ತಾನೆ; ವಾಕ್ಪತಿಯೂ, ಶ್ರೋತ್ರಪತಿಯೂ (ಆಗುವನು), ಅದಕ್ಕಿಂತಲೂ ಅಧಿಕವಾದ ಇದು ಆಗುವನು-ಆಕಾಶ ಶರೀರವೂ ಸತ್ಯಾತ್ಮವೂ ಪ್ರಾಣಾರಾಮವೂ ಮನ ಆನಂದವೂ ಶಾಂತಿ ಸಮೃದ್ಧವೂ ಅಮೃತವೂ ಆದ ಬ್ರಹ್ಮ. ಪ್ರಾಚೀನಯೋಗ[೨೮] ಪುತ್ರನೇ ಉಪಾಸಿಸು. ] ವೇದ ಖಂಡನೆಯು ನಿಷೇಧ ರೂಪವಾದರೆ, ತೈತ್ತರೀಯ ಉಪನಿಷತ್ತಿನ ಈ ಅನುವಾಕವು ಆ ನಿಷೆಧದಿಂದ ತೀರಭಿನ್ನವಾದ ಉಪಾಯ ನಿರೂಪಣೆಯ ರಚನಾತ್ಮಕವಾದವಾಗಿದೆ. ಮುಂಡಕೋಪನಿಷತ್ತು ವೇದಕರ್ಮವನ್ನು ಖಂಡಿಸುವ ಮೂಲಕ ತನ್ನ ಅಶ್ರೌತ (ವೇದ ವಿರೋಧಿ) ದೃಷ್ಟಿಕೋನವನ್ನು ವ್ಯಕ್ತಗೊಳಿಸಿದ್ದು ಇಂತಿದೆ.

ಪ್ಲಾವಾಹ್ಯೇತ್ಯೇ ಅದೃಢಾಯಜ್ಞರೂಪಾ ಅಷ್ಟಾದಶೋಕ್ತಮವರಂ
ಯೇಷು ಕರ್ಮ ।
ಏತಚ್ಛ್ರೇಯೋ ಯೋಽಭಿನಂದಂತಿ ಮೂಢಾಜರಾಮೃತ್ಯುಂ ತೇ
ಪುನರೇವಾಪಿ ಯಂತಿ । ಮುಂ. ಉ. ೧. ೨. ೭

[ ಈ ಹದಿನೆಂಟು ಯಜ್ಞರೂಪುಗಳು ನಾಶವಾಗುವವು, ಅದೃಢವು. ಅವುಗಳಲ್ಲಿ ಕೀಳುತರದ ಕರ್ಮವು ಉಕ್ತವಾಗಿರುತ್ತದೆ. ಇದು ಶ್ರೇಯಸ್ಸೆಂದು ಯಾವ ಮೂಢರು ಸಂತೋಷಿಸುವರೋ ಅವರು ಪುನಾ ಜರಾಮೃತ್ಯಗಳನ್ನು ಹೊಂದುತ್ತಾರೆ. ] ಇದು ಮುಂಡಕೋಪನಿಷತ್ತಿನ ಅಭಿಪ್ರಾಯವು. ಮುಂಡಕೋಪನಿಷತ್ತಿನ ಪ್ರಕಾರ ತ್ರಯೀಧರ್ಮವು (ಕರ್ಮಗಳು ಕೀಳು. ಈ ಮಾತು ಎರಡು ವಿಚಾರಗಳನ್ನು ಸೂಚಿಸುತ್ತದೆ. ಒಂದು ಬೇರೆ ಕರ್ಮ ವ್ಯವಸ್ಥೆಯು ವೇದಕರ್ಮವ್ಯವಸ್ಥೆಗಿಂತ ಉತ್ತಮತರವಾದುದುಂಟು ಎಂಬುದು. ಇನ್ನೊಂದು ವೇದಕರ್ಮಗಳು ದುಃಖಮಯ, ಸಂಸಾರ ಕಾರಣ, ಮತ್ತು ತ್ಯಾಜ್ಯವಾದಂಥವು ಎಂಬುದು. ಇವೆರಡು ಮಾತುಗಳನ್ನನುಸರಿಸಿ ತೋರುವ ಮತ್ತೊಂದು ವಿಚಾರವೆಂದರೆ ಆ ಉತ್ತಮ ಕರ್ಮ ವ್ಯವಸ್ಥೆಯು ಉಪನಿಷತ್ತುಗಳಿಗೆ ಮಾತ್ರ ಗೊತ್ತು ಎಂಬುದು. ವೈದಿಕ (ಶ್ರೌತ) ಕರ್ಮಗಳಿಂದ ದೊರೆಯುವಂಥದು 'ಪ್ರೇಯಸೇ' ಹೊರತು 'ಶ್ರೇಯಸಲ್ಲ' ಎಂಬು

---

೨೮ Sri Aurobindo, Eight Upanisads, p 137: Sri Aurobido Asrma Pondicherry. (1965).

ದನು ಮುಂಡಕೋಪನಿಷತ್ತು ಖಡಾಖಂಡಿತವಾಗಿ ಘೋಷಿಸುತ್ತದೆ. ಪ್ರೇಯಸಿಗಿಂತ ಶ್ರೇಯಸು ಶ್ರೇಷ್ಠ ಮತ್ತು ಶಾಶ್ವತ. ಶ್ರೇಯಸ್ಸು ಪರಬ್ರಹ್ಮವಾದ. ಅದು ಆತ್ಮಗುಣ. ಹೀಗೆ ಉಪನಿಷತ್ತು ವೇದನಿಂದನೆಯನ್ನು, ವೇದಕರ್ಮ ಮತ್ತು ಅದರ ಫಲದ ನಿಂದನೆಯನ್ನು ಮಾಡುವ ಮೂಲಕ ಅದಕ್ಕೆ ಪರ್ಯಾಯವಾದ ಸಾಧನ ವ್ಯವಸ್ಥೆಯನ್ನು, ಆ ಸಾಧನದಿಂದೊದಗುವ ಸಿದ್ಧಿಯನ್ನು ಸೂಚಿಸಿದೆ.

ತತ್ರಾಪರಾ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವವೇದಃ।
ಶಿಕ್ಷಾಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ॥

ಮುಂ. ಉ. ೧.೧.೫

[ಅವುಗಳಲ್ಲಿ ಅಪರಾವಿದ್ಯೆ (ಯಾವುದೆಂದರೆ)—ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಶಿಕ್ಷಾ ಕಲ್ಪ ವ್ಯಾಕರಣ ನಿರುಕ್ತ ಛಂದಸ್ಸು ಮತ್ತು ಜ್ಯೋತಿಷ.]

ಈ ಮಂತ್ರವು ವೇದ ಮತ್ತು ವೇದಾಂಗಗಳನ್ನು ಅಪಾರವಿದ್ಯೆಯ ಆಕರವೆಂದು ಹೆಸರಿಸಿದೆ. ಹೀಗೆ ಅಪಾರ ವಿದ್ಯೆಯ ಆಕರಗಳ ಹೆಸರುಗಳನ್ನು ಕೊಡುವದರ ಮೂಲಕ ಜಿಜ್ಞಾಸುವಿಗೆ ಸ್ಪಷ್ಟನಿರ್ದೇಶವನ್ನಿತ್ತಿದೆ. ಕ್ಷಣಿಕ ಸುಖವು ಹೇಗೆ ತ್ಯಾಜ್ಯವೋ ಹಾಗೆ ಈ ಸುಖಸಂಪಾದನೆಯ ಸಾಧನ ಭೋಧಿಸುವ ಕರಗತ ಮಾಡಿಕೊಡುವ ವೇದಾಂಗಗಳೂ ತ್ಯಾಜ್ಯವೆಂಬುದೇ ಅಪಾರವಿದ್ಯೆಯ ನಿಂದನೆಯ ಮಥಿತಾರ್ಥವಾಗಿದೆ. ಆದ್ದರಿಂದ ಮುಂಡಕದ್ದು ಅಶ್ರೌತ ಪ್ರಣಾಲಿ. ಇದು 'ಶ್ರುತಿಯ' 'ಅಶ್ರೌತ'. ಅಶ್ರೌತ ಪ್ರಣಾಲಿಯ ಆಕರಗಳಾದ ಉಪನಿಷತ್ತುಗಳು ಕೂಡ 'ಅಶ್ರೌತಾಗಮಗಳೇಸ್ಸೈ'. ವೇದ ಎಷ್ಟೋ ಸಾರೆ ಆಗಮಗಳೆಂದು ಸಬೋಧಿಸಲ್ಪಟ್ಟಿವೆ.⁂ ಎಂಬುದಿಲ್ಲಿ ಸ್ಮರಣಾರ್ಹ. ಮುಂಡಕೋಪನಿಷತ್ತಿನಂತೆ ಉಳಿದ ಮುಖ್ಯ ಉಪನಿಷತ್ತಗಳು ವೇದ ಧರ್ಮ(ಕರ್ಮ)ದ ಖಂಡನೆ ಮಾಡಿರುವವು. ಈಗ ಈನಿಟ್ಟಿನಲ್ಲಿ ಪ್ರಸ್ನೋಪನಿಷತ್ತು ಏನು ತಿಳಿಸುತ್ತದೆ ಎಂಬುದನ್ನು ನೋಡೋಣ—

ಪ್ರ.ಉ.೧.೯ ಸಂವತ್ಸರೋ ವೈ ಪ್ರಜಾಪತಿಸ್ತಸ್ಯಾಯನೇ ದಕ್ಷಿಣಂ ಚೋತರಂ ಚ ।
ತದ್ಯೇಹ ವೈ ತದಿಷ್ಟಾಪೂರ್ತೇತಿ ಕೃತಮಿತ್ಯುಪಾಸತೇ ।
ತೇ ಚಾಂದ್ರಮಸಮೇವ ಲೋಕಮಭಿಜಯಂತೇ।
ತ ಏವ ಪುನರಾವರ್ತ್ಂತೇ ತಸ್ಮಾದೇತ ಋಷಯಃ ಪ್ರಜಾಕಾಮಾ
ದಕ್ಷಿಣಂ ಪ್ರತಿಪದ್ಯಂತೇ। ಏಷಹ ವೈ ರಯಿರ್ಯಃ ಪಿತೃ ಯಾಣಃ॥

---

⁂ i] ರಂ.ರಾ. ದಿವಾಕರ. ವಚನಶಾಸ್ತ್ರ ರಹಸ್ಯ ಪು ೧೭೨ ಮೂರುಸಾವಿರಮಠ ಹುಬ್ಬಳ್ಳಿ (೧೯೬೮)

ii] ಉಪನಿಷದ್ಭಾಷ್ಯಗಳು ಸಂ ೫ (ಬೃಹದಾರಣ್ಯಕೋಪನಿಷತ್ತು-ಎರಡನೆಯ ಭಾಗ) ಪು ೧೨೨-೧೨೩ ಅಧ್ಯಾತ್ಮ ಪ್ರಕಾಶನ ಕಾರ್ಯಾಲಯ, ಹೊಳೆನರಸೀಪುರ (೧೯೫೪)

[ಸಂವತ್ಸರವೇ ಪ್ರಜಾಪತಿಯು, ಅದಕ್ಕೆ ದಕ್ಷಿಣವೆಂಬ ಮತ್ತು ಉತ್ತರವೆಂಬ ಎರಡು ಮಾರ್ಗಗಳಿವೆ. ಬ್ರಾಹ್ಮಣಾದಿಗಳಲ್ಲಿ ಯಾರು ಇಷ್ಟಾ ಪೂರ್ತಗಳೆಂಬ ಆಕೃತವನ್ನು ಉಪಾಸಿಸುವರೋ ಅವರು ಚಂದ್ರಲೋಕವನ್ನೇ ಹೊಂದುತ್ತಾರೆ. ಅವರೇ ಪುನಃ ಹಿಂದಿರುಗುತ್ತಾರೆ. ಆದ್ದರಿಂದ ಪ್ರಜಾಕಾಮರಾದ ಈ ಋಷಿಗಳು ದಕ್ಷಿಣಮಾರ್ಗವನ್ನು ಹೊಂದುತ್ತಾರೆ. ಯಾವುದು ಪಿತೃ ಯಾನವೋ ಅದು ಈ ಅನ್ನ.] ಅಪರಾವಿದ್ಯೆ ಯೆಂದು ಯಾವುದನ್ನು ಮುಂಡಕೋಪನಿಷತ್ತು ಕರೆದಿರುವುದೋ ಆ ಅಪರಾವಿದ್ಯೆ ದಕ್ಷಿಣ ಮಾರ್ಗವಾಗಿದೆ. ದಕ್ಷಿಣ ಮಾರ್ಗದಿಂದ ಕ್ಷಣಿಕ ಸುಖಭೋಗದ ಚಂದ್ರ ಲೋಕವನ್ನು ಪ್ರವೇಶಿಸಿ ಪುಣ್ಯಫಲ ತೀರಿದೊಡನೆ ಮತ್ತೆ ಹುಟ್ಟುವರು. ಅಂದರೆ ಭೂಲೋಕಕ್ಕೆ ಬರುವರು. ಮಕ್ಕಳನ್ನು ಬಯಿಸುವ ಋಷಿಗಳಿವರು. ಇವರು ಸಂಸಾರ ಮಗ್ನರೆಂದು ಅರ್ಥ. ಇದು ವೇದಕರ್ಮದ ಕ್ಷಣಿಕತೆಯನ್ನು, ಅದರ ಫಲದ ಕ್ಷಣಿ ಕತೆಯನ್ನು ತಿಳಿಸುವದು. ಕಾರಣದಂತೆ ಕಾರ್ಯ. ಇದು ಕ್ಷಣಿಕ ಕಾರಣದ ಫಲ ಕ್ಷಣಿಕ, ಕ್ಷಣಿಕ ಫಲದ ಕಾರಣ ಕ್ಷಣಿಕ ವಿಂಬ ಸಿದ್ಧಾಂತವಾಗಿದೆ. ಶಾಶ್ವತ ಸುಖ ಬಯಿಸು ವವರು ವೇದವಿದ್ಯೆಯನ್ನು-ಅಪರಾವಿದ್ಯೆಯನ್ನು ಬಯಿಸಬಾರದು ಎಂಬ ನೀತಿ ಯನ್ನು ಅನುಸರಿಸಬೇಕು ಎಂಬುದು ಇಲ್ಲಿಯ ಧ್ವನಿ. ಇದು ವೇದ ವಿರೋಧ, ವೇದಕರ್ಮ ವಿರೋಧವಾದ ಅಶ್ರೌತ ಪ್ರಣಾಲಿ. ಇದೇ ಉಪನಿಷತ್ತಿನ ಹತ್ತನೆಯ ಮಂತ್ರವು ವೇದಕರ್ಮವೆಂಬ ಸಾಧನ ವ್ಯವಸ್ಥೆಯಿಂದ ಅನ್ಯವಾದ ಸಾಧನ ವ್ಯವಸ್ಥೆಯನ್ನು ಪ್ರತಿಪಾದಿಸಿದೆ—

ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯೆಯಾತ್ಮ-
ನಮನ್ವಿಷ್ಯಾದಿತ್ಯ ಮಭಿಜಯಂತೇ ।
ಏತದ್ವೈ ಪ್ರಾಣಾನಾಮಾಯತನ ಮೇ ತದಮೃತ ಮಭಯಮೇ-
ತತ್ಪರಾಯಣ ಮೇತಸ್ಮಾನ್ನ ಪರಾವರ್ತಂತ ಇತ್ಯೇಷ ನಿರೋಧಸ್ತದೇಷ
ಶ್ಲೋಕಃ॥ ಪ್ರ. ಉ. ೧. ೧೦.

[ಈಗ ಇಂದ್ರಿಯ ಜಯದಿಂದಲೂ ಬ್ರಹ್ಮಚರ್ಯದಿಂದಲೂ ಶ್ರದ್ಧೆಯಿಂದಲೂ ವಿದ್ಯೆಯಿಂದಲೂ ಆತ್ಮನನ್ನು ಅನ್ವೇಷಿಸಿ ಉತ್ತರ ಮಾರ್ಗದಿಂದ ಆದಿತ್ಯ ಲೋಕ ವನ್ನು ಹೊಂದುತ್ತಾರೆ; ಇದೇ ಪ್ರಾಣಗಳಿಗೆ ಆಶ್ರಯವು. ಇದು ಅಮೃತವು, ಅಭ ಯವು, ಇದು ಪರಮಗತಿ, ಇದರಿಂದ ಹಿಂತಿರುಗುವದಿಲ್ಲ; (ಏಕೆಂದರೆ) ಇದು (ಅಜ್ಞಾನಿಗಳಿಗೆ) ತಡೆ. ಆ ವಿಷಯದಲ್ಲಿ ಈ ಮಂತ್ರವುಂಟು.] ಈ ಮಂತ್ರದಲ್ಲಿ ಮುಂಡಕವು ಖಂಡಿಸಿರುವ ಕ್ಷಣಭಂಗುರ ಲಘುವಾದ ಯಜ್ಞಯಾಗಾದಿ ಕರ್ಮ ವ್ಯವಸ್ಥೆಗೆ ಪರ್ಯಾಯವಾಗಿ ಶ್ರದ್ಧಾಯುಕ್ತ ಸಾಧನಮಾರ್ಗದ ವ್ಯವಸ್ಥೆಯನ್ನು ಮತ್ತು ಪರಾವಿದ್ಯೆಯನ್ನು ಶಾಶ್ವತಸುಖಕ್ಕಾಗಿ, ಅಮೃತತೆಯನ್ನು ಸಂಪಾದಿಸುವುದ

ಕ್ಕಾಗಿ ಹೇಳಲಾಗಿದೆ. ಇದೇ ಉತ್ತರ ಮಾರ್ಗ. ಇದು ವೇದಾಂತ ಅಥವ ಉಪನಿಷದ್ ವ್ಯವಸ್ಥೆ. ಚಂದ್ರ ಮತ್ತು ಆದಿತ್ಯರು ಅನುಕ್ರಮವಾಗಿ ಕ್ಷರ ಹಾಗೂ ಅಕ್ಷರಗಳ ಪ್ರತೀಕಗಳಾಗಿ ಬಳಸಲ್ಪಟ್ಟಿವೆ ಋಷಿಕವಿಗಳಿಂದ, ಕ್ಷಯ ಸ್ವಭಾವವನ್ನು ಒತ್ತಿ ತೋರಿಸುವುದೇ ಶ್ರುತಿಯ ಅಶ್ರೌತತೆ. ಈ ಉಪನಿಷತ್ತು ಹೇಳುವ ತಪ ಬ್ರಹ್ಮಚರ್ಯ ಶ್ರದ್ಧೆ ವಿದ್ಯೆಗಳು ಯೋಗದ ಅಂಗಗಳು. ಈ ಯೋಗವು ಕರಣ ಮತ್ತು ಜ್ಞಾನಯುಕ್ತ (ವಿದ್ಯಾಯುಕ್ತ)ವಾಗಿ ಮುಕ್ತಿ ತತ್ತ್ವ ವ್ಯವಸ್ಥೆಯಾಗಿರುತ್ತದೆ.

ಒಂಭತ್ತನೆಯ ಮಂತ್ರವು ದಕ್ಷಿಣ ಮಾರ್ಗದಿಂದ ಅಂದರೆ ತ್ರಯೀಯಿಂದ ಮುಕ್ತಿ ಇಲ್ಲವೆಂಬುನ್ನು ತಿಳಿಸಿ ಅಷ್ಟಕ್ಕೆ ಬಿಡಲಿಲ್ಲ. ವೇದ ಖಂಡನೆ ಮಾಡುವುದರ ಜೊತೆಗೆ ಉಪಾಸನೆ, ಯೊಗಸಾಧನಾಂಗಗಳನ್ನು ತಿಳಿಸಿ ಅಧ್ಯಾತ್ಮಿಕ ಬದುಕಿಗೆ ಹೊಸ ನಾಂದಿಯನ್ನು ಹೇಳಿದೆ, ಹೊಸ ಯುಗವನ್ನು ಅದರ ಚರಿತ್ರೆಯಲ್ಲಿ ಉಂಟುಮಾಡಿದೆ. ಈ ಶ್ರೌತಾಶ್ರೌತ ಪ್ರಣಾಲಿಗಳ ಪರಂಪರೆ ಅತ್ಯಂತ ಪ್ರಾಚೀನ ಎಂಬ ಚರಿತ್ರಾಂಶವನ್ನು ಈಶೋಪನಿಷತ್ತು ತಿಳಿಸುತ್ತದೆ. ಶ್ರೌತ ಪ್ರಣಾಲಿಯನ್ನದು ಸಂಭೂತಿಯೆಂದು ಹೆಸರಿಸಿದೆ-

ಅನ್ಯ ದೇವಾಹುಃ ಸಂಭವಾದನ್ಯ ದಾಹುರಸಂಭವಾತ್ ।
ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚ ಚ ಕ್ಷಿರೇ ॥ ಈ. ಉ. ೧೩

[ 'ಸಂಭೂತಿ (ಫಲವು) ಬೇರೆಯೆಂದೂ, ಅಸಂಭೂತಿ [ಫಲವು] ಬೇರೆಯೆಂದೂ (ಪೂರ್ವಾಚಾರ್ಯರು) ಹೇಳುತ್ತಾರೆ'; ಯಾರು ನಮಗೆ ಅದನ್ನು ವಿವರಿಸಿದರೋ (ಅಂತಹ) ಧೀರರಿಂದ ಹೀಗೆ ಕೇಳಿರುತ್ತೇವೆ. ] ಕ್ಷಣಿಕ ಫಲ ಬೇರೆ ಶಾಶ್ವತ ಫಲ ಬೇರೆ ಎಂಬ ವಿಚಾರವನ್ನು ಪ್ರಾಚೀನ ಧೀರರು ಹೇಳಿದ್ದನ್ನು ಈ ಮಂತ್ರವು ತಿಳಿಸುವ ಮೂಲಕ ಶಾಶ್ವತ ಫಲದ ಮಾರ್ಗವೇ ಯೋಗಾಗ್ನಿ, ಅಥವ ಅಗ್ನಿ ವಿದ್ಯೆಯಾಗಿದೆ. ಈ ಮಾರ್ಗಬೋಧನೆಗಾಗಿ ಋಷಿಯ ಪ್ರಾರ್ಥನೆ ಹೀಗಿದೆ-

ಅಗ್ನೇ ನಯ ಸುಪಥಾ ರಾಯೆ ಅಸ್ಮಾನ್ ವಿಶ್ವಾನಿ ದೇವ ವಯುನಾನಿ ವಿದ್ವಾನ್ ।
ಯುಯೋಽಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ॥ ಈ. ಉ. ೧೮.

[ಹೇ ಅಗ್ನಿ. ಕರ್ಮ ಫಲದ ಭೋಗಕ್ಕಾಗಿ ನಮ್ಮನ್ನು ಒಳ್ಳೆಯ ಮಾರ್ಗದಲ್ಲಿ ಕರೆದುಕೊಂಡು ಹೋಗು; ಹೇ ದೇವ, (ನೀನು) ಎಲ್ಲ ಕರ್ಮಗಳನ್ನು (ಅಥವ ಜ್ಞಾನಗಳನ್ನು) ತಿಳಿದಿರುವವನು. ನಮ್ಮ ಕುಟಿಲವಾದ ಪಾಪವನ್ನು ನಾಶ ಮಾಡು. ನಿನಗೆ ಪುನಃ ಪುನಃ ನಮಸ್ಕಾರ ಹೇಳುತ್ತೇನೆ. ] ಇಲ್ಲಿಯ ವಿಷಯವನ್ನು ಕುರಿತು ಇರುವ ವ್ಯಾಖ್ಯೆ

ಮುಲರರ ಅಭಿಪ್ರಾಯವು ಏನೆಂಬುದನ್ನು ನೋಡಿದರೆ ಶ್ರುತಿಯ ಅಶ್ರೌತತೆಯ ವಿವರಣೆಗೆ ಸಮರ್ಥನೆ ದೊರೆಯುತ್ತದೆ.

The doctrine of the Upanisads is throughout that orthodox and sacrifice can procure limited beatitude only, and that they are a hindrance to real salvation, which can be obtained by knowledge alone..... It was distinctly said before (ver. 3), that those who have destroyed their self i. e, who perform works only, and have not arrived at a knowledge of the true self go to the world of Asuras, which are covered with blind darkness. If then the same blind darkness is said in verse 9 to be the lot of those who worship not-knowledge, this can only mean those who have not discovered the true self, but are satisfied with the performance of good work." ತ್ರಯೀಕರ್ಮವು ಆತ್ಮಸಾಕ್ಷಾತ್ಕಾರದ ಮಾರ್ಗವೇ ಅಲ್ಲ. ಅದು ಸ್ವರ್ಗಸುಖ ಪ್ರಾಪ್ತಿ ಮಾರ್ಗ. ಆದುದರಿಂದಲೇ ಅದನ್ನು ಅವಿದ್ಯೆಯೆಂದು ಕರದಿರುವುದು. ಆದರೆ ಮುಂಡಕ ಪ್ರಶ್ನೆ ಉಪನಿಷತ್ತುಗಳು ಹೇಳಿದ್ದು ಬೇರೇರೀತಿಯ ಕರ್ಮ. ಇದು ತ್ರಯೀಗೆ ಗೊತ್ತಿಲ್ಲದ ಕರ್ಮನಿಷ್ಠೆ ಎಂದು ಮಹಾಭಾರತದಲ್ಲಿ೦ ಜನಕನಿಗೆ ಹೇಳಿದ್ದುಂಟು. ಅದು ಅಂತರಂಗ ಬಹಿರಂಗ ಶುದ್ಧಿಯ ಕರ್ಮ. ಇದಿಲ್ಲದೆ ಜ್ಞಾನಸಿದ್ಧಾಂತದ ಸಿದ್ಧಿಯಿಲ್ಲ. ಜ್ಞಾನಸಿದ್ಧಾಂತದ ಕಾರ್ಯಾಚರಣೆಯೆ ಈ ಕರ್ಮನಿಷ್ಠೆ. ಈ ಕರ್ಮನಿಷ್ಠೆ (ಯೋಗ ಅಥವ ಉಪಾಸನೆ) ಇಲ್ಲದ ಜ್ಞಾನವೆಂಬುದು ಅಜ್ಞಾನ.–ಆಚಾರವೆಂಬ ಕಾರ್ಯಾಂಗವಿಲ್ಲದ ಜ್ಞಾನ. ಬ್ರಹ್ಮಾಚಾರದ ದೃಷ್ಟಿಯಿಂದ ಇದು ಅವಶ್ಯವಿದೆ. ಇದು ಶ್ರೌತದಲ್ಲಿಲ್ಲದ, ಅದಕ್ಕೆ ವಿರುದ್ಧವಾದ ಪ್ರಣಾಲಿಯಾಗಿ ಅಶ್ರೌತವೆಂದು ಪ್ರಸಿದ್ಧಿ ಪಡೆಯಿತು. ಈ ಮಾತನ್ನು ಮಹಾನಾರಾಣೋಪನಿಷತ್ತು ಸಮರ್ಥಿಸುತ್ತದೆ.

ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ತ್ವಮಾನಶುಃ ।
ಪರೇಣ ನಾಕಂ ನಿಹಿತಂ ಗುಹಾಯಾಂ ವಿಭ್ರಾಜ ದೇತತ್ ಯತಯೋ ವಿಶಂತಿಃ॥

[ಈಗ ಪರಬ್ರಹ್ಮ ಪ್ರಾಪ್ತಿಗಾಗಿ ಅಂತರಂಗದ ಸಾಧನವಾದ ತ್ಯಾಗವನ್ನು ಹೇಳಲಾಗುತ್ತದೆ. ಅಗ್ನಿ ಹೋತ್ರದಿಂದಾರಂಭಿಸಿ ಒಂದು ಸಾವಿರ ವರುಷಗಳ ಕಾಲ ಅನುಷ್ಠಾನ ಮಾಡುವಂಥ ಯಾಗದವರೆಗಿನ ವೈದಿಕ ಕರ್ಮಗಳೇನಿವೆಯೋ ಅವುಗಳಾವುಗಳಿಂದಲೂ

O.Cf. Lokamanya Tilaka, Geeta Rahasya Vol. I.

ಅಮೃತತ್ವವು ಸಿಗುವದಿಲ್ಲ.] ಈ ಪ್ರಣಾಲಿಯನ್ನು ಮುಂಡಕವು ಸಮರ್ಥಿಸಿದ್ಧಂತಿದೆ-

ಪರಿಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದ
ಮಾಯಾನ್ನಾಸ್ತ್ಯಕೃತ: ಕೃತೇನ।
ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ
ಶ್ರೋತ್ರಿಯಂ ಬ್ರಹ್ಮನಿಷ್ಠಮ್॥ ಮುಂ.ಉ.೧.೨.೧೨

[ಬ್ರಾಹ್ಮಣನು ಕರ್ಮಕೃತವಾದ ಲೋಕಗಳನ್ನು ಪರೀಕ್ಷಿಸಿ ಅಕೃತವು ಕೃತದಿಂದಾಗುವದಿಲ್ಲ ಎಂದು ವೈರಾಗ್ಯವನ್ನು ಹೊಂದಬೇಕು. ಅದನ್ನು ತಿಳಿಯುವದಕ್ಕಾಗಿ ಅವನು ಸಮಿತ್ತುಗಳ ಕಂತೆಯನ್ನು ಕೈಯಲ್ಲಿ ಹಿಡಿದುಕೊಂಡು ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆದ ಗುರುವನ್ನೇ ಹೊಂದಬೇಕು.] ಯಜ್ಞಯಾಗಾದಿಕರ್ಮಗಳನಾಚರಿಸಿ ಪಡೆವ ಕ್ಷಣಿಕ ಸುಖದಗುರಿ, ಆದರಾಚರಣೆಯಿಂದ ಲಭ್ಯವಾದ ಲೊಕಗಳು ತಾಜ್ಯವೆಂದು ಬಿಡಲು ತಿಳಿಸುವ ಈ ಮಂತ್ರ ವೇದ ನಿಂದಾತ್ಮಕ. ಇನ್ನು ಛಾಂದೋಗ್ಯೋಪನಿಷತನ್ನು ನೋಡುವಾ. ಈ ಉಪನಿಷತಿನಲ್ಲಿಯ 'ಶೌವ ಉದ್ಗೀತ' ( ಛಾಂ.ಉ.೧.೧೨.೧೫ ) ದಿಂದ ವೇದ ನಿಂದೆ ಆಗಿರುವುದೆಂದು ತಿಳಿದು ಬರುತ್ತದೆ. ಇಲ್ಲಿ ಯಜ್ಞಮಾಡುವವರನ್ನು ನಾಯಿಗೆ ಹೋಲಿಸಲಾಗಿದೆ. ಋಗ್ವೇದ ಮಂತ್ರ ೧೦-೮೨ ರಲ್ಲಿ ವೇದಘೋಷವನ್ನು ನಿಂದಿಸುತ್ತ ವೇದವು ಬಾಲ ಭಾಷೆ ಎಂಬ ಅಶ್ರೌತ ಧಾಟಿಯನ್ನು ಛಾಂದೋಗ್ಯದ ಮಂತ್ರ ೧.೧೨.೧೫ ಮುಂದುವರಿಸಿದಂತಿದೆ. ಮಧ್ಯಯುಗದ ಶರಣರು, ಸಂತರು ಕೂಡ ವೇದನಿಂದೆಯಲ್ಲಿ ತೊಡಗಿದ್ದಾರೆ. ಹಾವಿನ ಹಾಳಕಲ್ಲಯ್ಯ ನಾಯಿಯ ಬಾಯಿಂದ ವೇದ ಹೇಳಿಸಿದರೆ, ಜ್ಞಾನದೇವ ಕೋಣನ ಬಾಯಿಂದ ವೇದ ಹೇಳಿಸಿದ್ದುಂಟು. ವೇದನಿಂದನೆಯ ಬೆಳವಣಿಗೆ ಅನೂಚಾನವಾಗಿ ಸಾಗಿ ಬಂದಿದೆ. ವಿದ್ವಾಂಸರು ವೇದೋಪನಿಷತ್ತುಗಳಲ್ಲಿಯ ಈ ವಾದವನ್ನು ಅನುಕ್ರಮವಾಗಿ Vedic free-thinking, Upanisadic heretical attitude ಎಂದು ಹೆಸರಿಸಿದ್ದಾರೆ. ಅಶ್ರೌತದ ಮೂಲ, ಬೆಳವಣಿಗೆಗಳನ್ನು ಈ ಸಮೀಕ್ಷೆ ಚಿತ್ರಿಸುತ್ತದೆ. ಛಾಂದೋಗ್ಯೋಪನಿಷತ್ತಿನಲ್ಲಿಯ ಸತ್ಯಕಾಮಜಾಬಾಲನ ಚರಿತ್ರೆಯು ಶ್ರುತಿಯ ಅಶ್ರೌತತೆಯ ಉತ್ತಮ ಉದಾಹರಣೆ. ಛಾಂದೋಗ್ಯದ ಇನ್ನೊಂದೆಡೆಯಲ್ಲಿ ಅಶ್ರೌತತೆ ವ್ಯಕ್ತಪಡಿಸಿದ್ಧಂತಿದೆ-

ತದ್ಯಥೇಹ ಕರ್ಮಜಿತೋ ಲೋಕಃ ಕ್ಷೀಯತ ಏವಮೇವಾಮುತ್ರ
ಪುಣ್ಯಜಿತೋ ಲೋಕ ಃ ।
ಕ್ಷೀಯತೇ ತದ್ಯ ಇಹಾಽಽತ್ಮಾನಮನನು ವಿದ್ಯ ವ್ರಜಂತೇ ತಾಗ್ಂಶ್ಚ ಸತ್ಯಾನ್
ಕಾಮಾಂ ತೇಷಾಗ್ಂ
ಸರ್ವೇಷ್ವ ಕಾಮಚಾರೋ ಭವತ್ಯಥಯ ಇಹಾಽಽತ್ಮಾನಮನು ವಿದ್ಯ ವ್ರಜನ್ತೇ
ತಾಗ್ಂಶ್ಚ ಸತ್ಯಾನ್ ಕಾಮಗ್ಂ ಸ್ತೇಷಾಗ್ಂ ಸರ್ವೇಷು ಲೋಕೇಷು
ಕಾಮಚಾರೋ ಭವತಿ॥ಛಾಂ ಉ ೮-೧-೬.

[And as here on earth, whatever has been acquired by exertion, perishes, so perishes whatever is acquired for the next world by sacrifices and other good actions performed on earth. Those who depart from hence without having discovered the Self and those true desires, for them there is no freedom in all the worlds. But those who depart from hence, after having discovered the Self and those true desires, for them there is freedom in all the worlds.[೩೦].] ಈ ಮಂತ್ರವು ಕೂಡ ಯಜ್ಞಯಾಗಾದಿಗಳನ್ನು, ಪುಣ್ಯಕರ್ಮಗಳನ್ನು ಕ್ಷಣಿಕ ಸುಖದ ಸಾಧನಗಳೆಂದು ತಿಳಿಸುವ ಮೂಲಕ ವೇದ ಖಂಡನೆಯೆ ಆಗಿದೆ. ಆತ್ಮಾನ್ವೇಷಣೆಯೇ ಮುಕ್ತಿ ಮಾರ್ಗವೆಂದಿಲ್ಲ ತಿಳಿಸಲಾಗಿದೆ. ಹೀಗೆ ಛಾಂದೋಗ್ಯವು ಅಶ್ರೌತ ಪ್ರಣಾಲಿಯನ್ನು ಪ್ರತಿಪಾದಿಸಿದೆ.

ದಾಸೀ ಪುತ್ರನಾದ ಸತ್ಯಕಾಮನ ವೃತ್ತಾಂತವು ವರ್ಣಸಂಕರವಾಗಿದೆ. ಆಶ್ರಮ ಸಂಕರವಾಗಿದೆ, ವೇದ ವಿರೋಧವಾಗಿದೆ.

> ತಗ್ಂ ಹೋವಾಚ ನೈತದಬ್ರಾಹ್ಮಣೋ ವಿಮುಕ್ತರ್ಮಹತಿ ಸಮಿದಗ್ಂ ಸೋಮ್ಯಾಹರೋಪ ತ್ವಾ ನೇಷ್ಯೇನ ಸತ್ಯಾದಗಾ ಇತಿ ತಮುಪನೀಯ ಕೃಶಾನಾಮ ಮಬಲಾನಾಂ ಚತುಃ ಶತಾಗಾ ನಿರಾಕೃತ್ಯೋ ವಾಚೇ ಮಾ ಃ ಸೋಮ್ಯಾನು ಸಂವ್ರಜೇತಿ ತಾ ಅಭಿಪ್ರಸ್ಥಾಪನೆಯನ್ನುವಾಚ ನಾ ಸಹಸ್ರೇ ಣಾವರ್ತೇಯೇತಿ ಸ ಹ ವರ್ಷಗಣಂ ಪ್ರೋವಾಸ ತ ಯದಾ ಸಹಸ್ರಗಃ ಸಂಪೇದುಃ ||ಛಾಂ.ಉ.೪.೪.೫

( ಗೌತಮನು ) ಅವನನ್ನು ಕುರಿತು ಅಬ್ರಾಹ್ಮಣನು ಇದನ್ನು ಹೇಳಲಾರನು. ಸೋಮ್ಯ, ಸವಿತ್ತನ್ನು ತಗೆದುಕೊಂಡು ಬಾ! ನಿನಗೆ ಉಪನಯನವನ್ನು ಮಾಡಿಸುವೆನು. (ನೀನು) ಸತ್ಯವನ್ನು ಬಿಟ್ಟಿರುವದಿಲ್ಲ' ಎಂದನು. ಅವನಿಗೆ ಉಪನಯನವನ್ನು ಮಾಡಿಸಿ ಕೃಶವಾಗಿ ಬಲವಿಲ್ಲದಿದ್ದ ನಾನೂರು ಗೋವುಗಳನ್ನು ತಗೆದು ಕೊಟ್ಟು 'ಸೋಮ್ಯ' ಇವುಗಳನ್ನು ಹಿಂಬಾಲಿಸು ಎಂದನು. ಅವುಗಳನ್ನು ಹೊರಡಿಸಿಕೊಂಡು ಹೋಗುವಾಗ (ಸತ್ಯಕಾಮನು) 'ಸಹಸ್ರವಿಲ್ಲದೆ ಹಿಂತಿರುಗೆನು' ಎಂದನು. ಅವನು ವರುಷಗಟ್ಟಲೆ

---

30. Max Muller, Upanisads pt. I Dovoers Publication (1962)

ಹೊರಗಿದ್ದನು. ಅವು ಯಾವಾಗ ಸಾವಿರದವೋ (ಆಗ)— ಅವನಿಗೆ ಉಪನಯನ ವನ್ನು ಮಾಡಿಸಿ] ಎಂಬುದಕ್ಕೆ ಭಾಷ್ಯದಲ್ಲಿ ಅಂದರೆ ಸೂತ್ರ ಭಾಷ್ಯದಲ್ಲಿ (೧.೩.೩೭) ಶೂದ್ರನಲ್ಲವೆಂದು ನಿರ್ಧರಿಸಿದ ಮೇಲೆಯೇ ಉಪನಯನವನ್ನು ಮಾಡಿಸಿದನೆಂದು ಹೇಳಿ ರುವುದರಿಂದ ವೈದಿಕ ಬ್ರಹ್ಮ ವಿದ್ಯೆಯಲ್ಲಿ ಶೂದ್ರನಿಗೆ ಅಧಿಕಾರವಿಲ್ಲವೆಂದಂತಾಯಿತು ಎಂದು ನಿರ್ಣಯಿಸಿರುವದುಂಟು. ಇದು ವರ್ಣಾಶ್ರಮದ ರೀತಿ. ಇದು ಶ್ರುತಿಯ ಇಂಗಿತವಲ್ಲ. ಶೂದ್ರನನ್ನು ಬ್ರಾಹ್ಮಣ ಗುಣದವನೆಂದು ಪರಿಗಣಿಸಿ ಉಪನಯನ ಮಾಡಿದರು. ಗುಣಕ್ಕೆ ಬೆಲೆಯಲ್ಲದೆ ಜಾತಿಗಲ್ಲ. ಶ್ರುತಿ (ಉಪನಿಷತ್‌ನ) ಯ ಅಶ್ರೌತತೆ. ಅಂದರೆ ಜನನದಿಂದ ಬ್ರಾಹ್ಮಣತ್ವವನ್ನು ಪರಿಗಣಿಸಿದ ರೀತಿ. ಉಪ ನಿಷತ್ತುಗಳ ವರ್ಣಾಶ್ರಮ ಮೀರಿವರ್ತಿಸುವ ಪರಂಪರೆಗೆ ಶ್ವೇತಾಶ್ವತರೋಪ ನಿಷತ್ತಿನಲ್ಲಿ ಅತ್ಯಾಶ್ರಮ ಪರಂಪರೆಯೆಂದು ಸಂಬೋಧಿಸಲಾಗಿದೆ. ಈ ಪರಂಪರೆಯು ಪ್ರಾಚೀನವೆಂದು ಈ ಉಪನಿಷತ್ತುಗಳು ತಿಳಿಸುತ್ತವೆ. ಈ ಪರಂಪರೆಯವರು ಸತ್ಯ ಬೋಧಕರಾಗಿದ್ದಾರೆಂದು ತಿಳಿದು ಬರುತ್ತದೆ. ಇವರ ಈ ಪ್ರಾಚೀನ ಕಲ್ಪದ ಪರಂಪರೆಯನ್ನು, ಬಹುತೇಕ ಉಪನಿಷತ್ತುಗಳು ಪ್ರಾಚೀನ ಕಲ್ಪವೆಂದು ಹೆಸರಿಸು ವುದು, ಸ್ಮರಸಿದಂತಿದೆ.

ಈ ವಿಚಾರ ಮತ್ತು ಆಚಾರಗಳ ರೂಢಿಯು ಉಪನಿಷತ್ತುಗಳ ಕಾಲಾವಧಿ ಯಲ್ಲಿ ಮಾತ್ರ ಸಜೀವವಾಗಿದ್ದಿತೆಂದೇನು ತಿಳಿಯಬೇಕಿಲ್ಲ. ಅದು ವೈದಿಕ ವರ್ಣಾಶ್ರಮ, ಬ್ರಹ್ಮ ಕರ್ಮಗಳ ಕರ್ಮರತೆಯ ಮರುಳುಗಾಡಿನಲ್ಲಿ ಗುಪ್ತಗಾಮಿನಿಯಾಗಿ, ಸರಸ್ವತಿನದಿ ಯಂತೆ ಹರಿದುಕೊಂಡಿದ್ದು ಭಾರತೀಯತೆಯ ನಿತ್ಯನಾವೀನ್ಯಕ್ಕೆ ಸ್ವತಂತ್ರ ಅಥವ ನಿರಂಕುಶ ಪ್ರತಿಭೆಯ ಬೇರಿಗೆ ಸದಾ ಆ ಅಮೃತತೆಯನ್ನೂಡಿಸುತ್ತಲೇ ಇರುವದು. ಬ್ರಹ್ಮಸೂತ್ರಗಳೆಂದು ಪ್ರಸದ್ಧಿ ಪಡೆದವುಗಳಲ್ಲಿ ಉಪನಿಷದ್ ಸೌರಭ ಪರಿಮಳಿಸುವದು. ಒಟ್ಟಿನ ಮೇಲೆ ಎಲ್ಲ ಉಪನಿಷತ್ತುಗಳೂ ವೇದ, ವೇದಾಂಗಗಳ ಅಧ್ಯಯನದಿಂದ ಪರಬ್ರಹ್ಮಸಾಕ್ಷಾತ್ಕಾರ ಇಲ್ಲವೆ ಆತ್ಮಸಾಕ್ಷಾತ್ಕಾರ ಸಾಧ್ಯವಿಲ್ಲೆಂದು ಹೇಳಿ ಅದರ ಹಿರಿಮೆ ಗರಿಮೆಗಳನ್ನು ತಿರಸ್ಕರಿಸುತ್ತವೆ. ವೇದ ಕರ್ಮಗಳಾದ ಯಜ್ಞಯಾಗಾದಿಗಳು ಸ್ವರ್ಗ ಸುಖವನ್ನು ಮಾತ್ರ ಸಂಪಾದಿಸುವ ಸಾಧನಗಳಾಗಿವೆ. ಸ್ವರ್ಗಸುಖ ಕ್ಷಣಿಕ ವಾದುದರಿಂದ ವೇದಕರ್ಮಗಳು ಶಾಶ್ವತ ಸುಖದ ಸಾಧನವಲ್ಲ. ಅವುಗಳು ಅದೃಢ ಡೋಣಗಳಿದ್ದಂತೆ ಸಂಸಾರ ಸಾಗರ ದಾಟಬೇಕೆನ್ನುವ ಜಲಪರ್ಯಟನಗಾರರಿಗೆ ಎಂದು ತಿಳಿಸುತ್ತವೆ. ವೇದಕರ್ಮದಂತೆ ಪುಣ್ಯಕರ್ಮಗಳು (good deeds or moral deeds) ಕೂಡ ಕ್ಷಣಿಕ ಸುಖದ ಸಾಧನವೆಂದು ಬಗೆಯುತ್ತವೆ. ಉತ್ತಮ ವರ್ಣ ದವರ ವೇದಾಧ್ಯಯನದ ಹಕ್ಕಿನ ಉಲ್ಲಂಘನೆ ಉಪನಿಷತ್ತುಗಳಿಂದಾಗಿದೆ. ಈ ಅಂಶವು ಇಲ್ಲಿ ಎದ್ದು ಕಾಣುತ್ತದೆ. ಅತ್ಯಾಶ್ರಮ ಅಥವ ಅತಿವರ್ಣಾಶ್ರಮ ಪ್ರಣಾಲಿಯು ವರ್ಣಧರ್ಮದ ನಿಷ್ಪ್ರಯೋಜಕ ದೃಷ್ಟಿಯನ್ನು ಎತ್ತಿ ತೋರಿಸುವುದು.

ಇದು ಪುರಾಕಲ್ಪ ಪ್ರಣಾಲಿಯಾಗಿ ವರ್ಣಧರ್ಮ ಚರಿತ್ರದ ಪೂರ್ವಕಾಲದಲ್ಲಿ ಇದ್ದು, ವರ್ಣಕರ್ಮ ಪ್ರಾಬಲ್ಯದಿಂದ ಮಸುಕುಗೊಂಡು ಉಪನಿಷತ್ಕಾಲದಲ್ಲಿ ಪ್ರಾಜ್ವಲ್ಯ ಮಾನವಾಗಿ ಬೆಳಗಿದೆ ಎಂಬುದು ತಿಳಿದು ಬರುತ್ತದೆ. ವೇದವು ಸ್ವಯಂಭು ಎಂಬ ವಾದವನ್ನು ಬೃಹದಾರಣ್ಯಕ ಮತ್ತು ಶ್ವೇತಾಶ್ವತರಗಳು ನೇರವಾಗಿ ಅಲ್ಲಗಳೆವುದನ್ನು ನೋಡುತ್ತೇವೆ. ವೇದಕರ್ಮ ಸಾಧನ ವ್ಯವಸ್ದೆಗೆ ಪರ್ಯಾಯ ಸಾಧನ ವ್ಯವಸ್ಥೆಯನ್ನು ಉಪನಿಷತ್ತುಗಳು ಮಾಡಿವೆ. ಇವೆಲ್ಲ ಮಾತುಗಳು ಶ್ರುತಿಯ ಅಶ್ರೌತತೆಯ ಸ್ಥೂಲ ಪರಿಚಯ ಮಾಡಿವೆ.

## ಅಶ್ರೌತದ ಯುಗಯಾತ್ರೆ :

ಉಪನಿಷತ್ತುಗಳು ವ್ಯಕ್ತ ಪಡಿಸಿದ 'ಅಶ್ರೌತ'ತೆಯು ಬೌದ್ಧಧರ್ಮದ ಉಗಮಕ್ಕೆ ಕಾರಣವಾಯಿತು. ಬೌದ್ಧರ 'ಅಶ್ರೌತ' ವಾದವು ಉಪನಿಷತ್ತಿನ 'ಅಶ್ರೌತ' ವಾದದ ಅತಿರೇಕದ ಸ್ವರೂಪವಾಗಿ, ಅದು ಶ್ರುತಿಯ ಪಥದಿಂದ ಸಿಡಿದು ಹೋಗಿ ನಾಸ್ತಿಕ ವಾದವಾಯಿತು. ಇದೇ ಕಾಲಕ್ಕೆ ಶ್ರುತಿಯ ಅಶ್ರೌತತೆಯು ತನ್ನ ಮೂಲಸತ್ವಯುತ ಚೈತನ್ಯವನ್ನುಳಿಸಿಕೊಂಡಿತು ; ತನ್ನ ತನದ ರಕ್ಷಣೆಯ ಕಾರ್ಯದಲ್ಲಿ ಪಥಕ್ರಮಣ ಮಾಡಿತು. ಶೈವಾಗಮಗಳಲ್ಲಿ ಮತ್ತು ಪಂಚರಾತ್ರಾಗಮಗಳಲ್ಲಿ ಇದನ್ನು ನೋಡುತ್ತೇವೆ. ಪಂಚರಾತ್ರಾಗಮಗಳಲ್ಲಿಯ ಅಶ್ರೌತತೆಗಿಂತ ಶೈವಾಗಮಗಳಲ್ಲಿಯ ಅಶ್ರೌತತೆ ತೀವ್ರವಾಗಿದೆ ; ವ್ಯಾಪಕವಾಗಿದೆ. ಶೈವಾಗಮದಿಂದ ಪುರಾಣ–ಹಿಂದೂಧರ್ಮದಲ್ಲಿ ಮತಾಂತರ ಕಾರ್ಯವು ನಡೆಯಿತು. The Agamas served a very important part in mitigating the influence of and finally absorbing Buddhism and Jainism in Hinduism. The Agamas may be rightly held responsible for creating the Hinduism of today as contrasted with Brahmanism depicted in the Satras."[೩೦] ಎಂದು ಶ್ರೀನಿವಾಸ ಅಯ್ಯಂಗಾರ ಅವರು ಆಗಮಗಳ ಸ್ವತಂತ್ರ ಮುಕ್ತ ವಿಚಾರವಾದದ ಹಿರಿಮೆಯನ್ನು ಮತ್ತು ಮಹತ್ಕಾರ್ಯವನ್ನು ಎತ್ತಿ ತೋರಿಸಿದ್ದಾರೆ.

ಮತಾಂತರ, ವರ್ಣಸಂಕರ, ಕರ್ಮಸಂಕರಗಳಿಂದ ಸಂರಕ್ಷಿಸಿದ ಅಶ್ರೌತಾಗಮಗಳ ವಿರುದ್ಧ ಕಾರ್ಯಾಚರಣೆ ಶ್ರೌತ ಶೈವಾಗಮಗಳಿಂದ ಪ್ರಾರಂಭವಾಗದಿರಲಿಲ್ಲ. ಅದರ ಪ್ರಬಲತೆಯನ್ನು ಮಸುಳಿಸಲು ವರ್ಣಾಶ್ರಮ ಧರ್ಮ ಸಂರಕ್ಷಣೆಯ ಹೆಸರಿನಲ್ಲಿ ಹಲವಾರು ರಿಯಾಯಿಗಳನ್ನು ಸ್ಮೃತಿಗಳು, ಪ್ರಕರಣ ಗ್ರಂಥಗಳು ತೋರಿಸುವಲ್ಲಿ ತೊಡ

---

೩೦ Journal of Karnataka University Voi. (1962).

ಗಿದವು. ಮಧ್ಯಯುಗದ ಈ ಹೋರಾಟಕಾರ್ಯದಲ್ಲಿ ಶ್ರೌತ ಶೈವಾಗಮಿ ಆಚಾರ್ಯರಲ್ಲಿ ಪ್ರಮುಖರೆಂದರೆ ಶಂಕರಾಚಾರ್ಯರೆಂದು ಹೇಳಲಾಗುತ್ತದೆ:- So there was an opposition betweeen the Smritis and Agamas in regard to these Varnas and as to the accessibility of the sacred learning to the Shudras. The controversy grew so keen as time went on that the Smriti writers began to preach that Shaivagamas were meant only for those who were fallen from the teachings of the Vedas and mainly intended to misguide the wicked, who if they turn to the Vedic lore, would abuse the same and should be prevented from access to it. Though in ancient times the Agamas appear to have been studied as a part of sacred learning, we find that Shankaracharya maintain ing that the Agamic literature was not authoritative. The influence of the Brahmanic teaching was so great, that the Agamic literature was lost to the world. The great Basava then preached and spread the doctrine of the Agamas and thus there was their revival in Karnatak [೩೨]

ಪಾವಟೆ ಸಿದ್ಧರಾಮಪ್ಪನವರು ತಿಳಿಸಿದ ವಿಚಾರಗಳಂತೆ ಅಶ್ರೌತಾಗಮದ ವಿರದ್ಧ ನಡೆದ ಹೋರಾಟದಲ್ಲಿ ರಾಜ ಮಹಾರಾಜರೂ, ಸ್ಮೃತಿ ಮತ್ತು ಪ್ರಕರಣಗ್ರಂಥಗಳೂ, ಮುಂಚೂಣಿಯಲ್ಲಿದ್ದವು. ಇವಲ್ಲದೆ ಶಂಕರಾಚಾರ್ಯರದು ಪಾತ್ರ ಬಹು ದೊಡ್ಡದೆಂದು ತಿಳಿದು ಬರುತ್ತದೆ. ಅವರು ಅಶ್ರೌತದ ಅಧ್ವರ್ಯುಗಳಾದ ಉಪನಿಷತ್ತುಗಳ ತತ್ವಜ್ಞಾನವನ್ನು ಬ್ರಹ್ಮಸೂತ್ರ, ಭಗವದ್ಗೀತೆಗಳ ವಿಚಾರವನ್ನು ಒಪ್ಪಿಕೊಂಡರೂ ಅವುಗಳ ಅಶ್ರೌತ ಪ್ರಣಾಲಿಯನ್ನು ಕಡೆಗೆಣಿಸಿದ್ದಾರೆ. ಅವರು ಶ್ರೌತಾಗಮದ ಕಟ್ಟಾ ಅಭಿಮಾನಿಗಳು. ವರ್ಣಧರ್ಮ ಮತ್ತು ವರ್ಣಧರ್ಮ ಕರ್ಮಗಳನ್ನು ಎತ್ತಿಹಿಡಿದ ಬಹುದೊಡ್ಡ ಪ್ರತಿಭಾವಂತ ಆಚಾರ್ಯರು. ಕರ್ಮದ ಅವಶ್ಯಕತೆ ಅಂದರೆ ಯಜ್ಞಯಾಗಾದಿಗಳ ಅವಶ್ಯಕತೆಯನ್ನು ಶಂಕರಾಚಾರ್ಯರು ಎತ್ತಿಹಿಡಿದು, ಅದರ ಪ್ರಯೋಜನವಾದಕ್ಕೇ ಬೆಲೆಕೊಡುವರು. ಅವರು ಉಪನಿಷತ್ತುಗಳು ಹೇಳುವಂತೆ ಅವು ನಿರಪಯುಕ್ತವೆಂದು ಬಗೆಯುವದಿಲ್ಲ-

---

೩೨. Siddharamapp. D. Pavate. Virasaiv Philosophy of the Saivagamas, p. 6. Hubli (1927).

"....On this abeve mentioned ground of destructibility of Karma, Sankara did not advocate the logical step of the abolution of all Vedic Karmas. Any Attack on this most sensetive part of the Hindu, viz, his deference to thc Vedas, especially in the days of Vedic revivalism against the Buddhists, would have been most unpopular. So the Vedic Karmas were to be performed by those who desired the results of these Karmas and did not care for its bliss,

But Shankaras genius recognised a more fundamental reason for retaining Karmas, which the Buddhists had not understood and which consequently brought ruin on their heads. Even though Buddha and his followers taught the 8 golden rules of conduct, the common masses could not feel enthusiasm about these alone. So came about the gorgeous worship of the mighty Buddha images. Sankar understood this well. Sankar said that the Vedas had two parts, the Karma Kanda and Jnana kanda. Both were equally valid. He further contended that the Mimamsakas were wrong in stating that Karma Kanda alone was valid. Both have to be accepted. Those who do not feel an inclination for Jnanapractices need not, however, take them up: They may take up Karma Kanda and perform action: Action is in the Very nature of man, and not merely of children. So Sankara preached that both Karma Kanda as well as Jnana Kanda should be accepted by all the Hindus; only each had its appropriate time.

....Some wrongly think Sankara taught only Jnana and no placc for Karma. Sanakara held that the place of Jnana was all-important but he knew equally well that many could not give up Karma and so they should

be taught the most beneficial forms of Karma. This it is that the Panchayatana Puja (the Worship of five Gods) came into vogue in Smartha homes. The other name for this is Shiva Puja, Smarthas mean the followers of Smrstis as of old, in contrast to those who follow the new paths set by Ramanuja and Madhwa." [೩೩]

ಶಂಕರಾಚಾರ್ಯರು ವೈದಿಕ ಕರ್ಮಗಳನ್ನು ತೆಗೆದು ಹಾಕದಿರುವುದು ಬೌದ್ಧ ಧರ್ಮದ ಸ್ವಾತಂತ್ರ್ಯದ ಅವೈದಿಕ ಉಪಾಸನಾದಿಗಳ ಹಾನಿ ಗಮನಿಸಿ ವರ್ಣಕರ್ಮದ ಪುನರುತ್ಥಾನದ ದೃಷ್ಟಿಯಿಂದ ಎಂದು ತೀರ್ಮಾನಿಸುವದು ಯೋಗ್ಯವೆ. ಅದೇ ರೀತಿ ಅಶ್ರೌತಾ ಗಮದ ವೈಚಾರಿಕ ಸ್ವತಂತ್ರ್ಯ, ವೈದಿಕ ಕರ್ಮ ಖಂಡನೆ, ವೇದಖಂಡನೆ ಹಾಗೂ ಇವುಗಳ ಪರ್ಯಾಯ ಉಪಸನಾ ವ್ಯವಸ್ಥೆ ಮತ್ತು ವಿಚಾರ ವ್ಯವಸ್ಥೆಗಳನ್ನು ತುಳಿಯುವ ಕಾರ್ಯವೂ ನಡೆದು ಹೋಯಿತು ವೈದಿಕ ವರ್ಣಕರ್ಮ ಪುನರುತ್ಥಾನದ ಅದ್ದೂರಿಯಲ್ಲಿ.

ರಾಜ ಮಹಾರಾಜರ, ಸ್ಮೃತಿಕಾರರ, ಪ್ರಕರಣ ಗ್ರಂಥಗಳ, ಹಾಗೂ ಶಂಕರ ರಂಥ ಆಚಾರ್ಯರ ಅತಿ ಕ್ರಮಣವು ಯಶಸ್ವಿ ಆಗಲಿಲ್ಲ. ಅದು ಅಂದರೆ ಅಶ್ರೌತಾಗಮವು ಜನಸಾಮಾನ್ಯರ ಅಂದರೆ ಬಹು ಸಂಖ್ಯಾತರ ಮನವನ್ನು ಶೂದ್ರರಲ್ಲಿ ಜನಿಸಿದ ವಿದ್ವಾಂಸರಿಂದ, ಕವಿಗಳಿಂದ ಆಳುತ್ತಿತ್ತು. ಅದರ ಮೇಲುಗೈಯಾದುದರ ಪರಿಣಾಮ ವಾಗಿ ಶೂದ್ರರು ವೇದವನೋದಬಹುದು, ಉಚ್ಚವರ್ಣದವರ ಕರ್ಮಗಳನ್ನು ಮಾಡಬಹುದು ಎಂಬ ರೀಯಾಯತಿಗಳನ್ನು ೭. ೮. ೧೦. ೧೧ನೆಯ ಶತಮಾನಗಳ ಸ್ಮೃತಿಗಳಲ್ಲಿ ಪ್ರಕರಣ ಗ್ರಂಥಗಳಲ್ಲಿ ತೋರಿಸಲಾಗಿದೆ. ಇದಕ್ಕಿಂತಲು ಹೆಚ್ಚಾಗಿ ಈ ಕಾಲಾವಧಿಯಲ್ಲಿ ಉತ್ತರ ಭಾರತದ ಶೈವಪಂಥಗಳು, ದಕ್ಷಿಣ ಭಾರತದ ಶೈವ ಪಂಥ ಗಳು ಅಶ್ರೌತಾಗಮವನ್ನು ಜನಪ್ರಿಯಗೊಳಿಸುವ ಕಾರ್ಯವು ಅವ್ಯಾಹತವಾಗಿ ನಡೆದು ದನ್ನು ನೋಡುತ್ತೇವೆ. ಹೀಗೆ ಅಶ್ರೌತಾಗಮವು ಸದಾವಕಾಲ ಮುಕ್ತವಿಚಾರವಾದಿ ಗಳ, ಜನಸಾಮಾನ್ಯರ ಮನಸ್ಸನ್ನು ಅನಾದಿಕಾಲದಿಂದ ಆಕರ್ಷಿಸುತ್ತ ಬಂದಿದೆ. ಪುರಾಣ–ಹಿಂದೂಧರ್ಮದ ಪುನರುತ್ಥಾನ ಅಶ್ರೌತಾಗಮದಿಂದ ಕಾಲಕಾಲಕ್ಕೆ ಆಗುತ್ತಲೇ ಬಂದಿದೆ. ಇದು ಅಶ್ರೌತಾಗಮದ ಯುಗ ಯಾತ್ರೆಯ ಇಣುಕು ನೋಟ.

**ಬ್ರಹ್ಮಸೂತ್ರದ ಅಶ್ರೌತತೆ**

ಶ್ರೀಕರ ಭಾಷ್ಯ ಹಾಗೂ ಇನ್ನುಳಿದ ವಿಶಿಷ್ಟಾದ್ವೈತ, ದ್ವೈತಾದಿ ಭಾಷ್ಯಗಳಲ್ಲಿ ಪೂರ್ವಮೀಮಾಂಸಾ ಶಾಸ್ತ್ರದ ವಿಚಾರ ಪರಾಮರ್ಶೆಯನ್ನು ಶಾಂಕರಭಾಷ್ಯ

---

೩೩ Swami Atmananda Sri Sankara's Teachings in his own word pp 43-45. Bhavan's Book University (1964).

ದಲ್ಲಿಯೆಂತೆಯೇ ಮಾಡಿವೆ. ಇದು ಶ್ರುತಿಯ ಅಶ್ರೌತ ಪ್ರಣಾಲಿಯ ಪರಾಮರ್ಶೆ: ಪೂರ್ವ ಮೀಮಾಂಸಾ ಶಾಸ್ತ್ರದ ಶಂಕೆಯನ್ನು ನಿರಾಕರಿಸಲಿಕ್ಕಾಗಿ ಈ ಅಧಿಕರಣ ಹೊರಿಟಿದೆ ಎಂಬುದೇ ಬ್ರಹ್ಮಸೂತ್ರ ಭಾಷ್ಯಕಾರರೆಲ್ಲರ ಮತ. ವೇದಕ್ಕೆ(ಅಂದರೆ ಮೀಮಾಂಸಕರು ಮಂತ್ರ ಬ್ರಾಹ್ಮಣಗಳಿಗೇ ವೇದವೆಂದಿರುವದರಿಂದದಕ್ಕೆ) ಯಜ್ಞ ಯಾಗಾದಿಗಳು ಜ್ಯೋತಿಷ್ಟೋಮಾದಿ ಕರ್ಮಗಳೇ ಮುಖ್ಯ. ಜ್ಞಾನವು ಗೌಣವು. ಈ ಕರ್ಮಗಳನ್ನು ಒಂದಿಲ್ಲ ಒಂದು ದೃಷ್ಟಿಯಿಂದ ನಿಂದಿಸುವುದು ವೇದ ನಿಂದೀಯೇ ಆಗಿರುತ್ತದೆ. ಬ್ರಹ್ಮಸುತ್ರವು ಈ ದೃಷ್ಟಿಯಿಂದ ವೇದನಿಂದನೆಯಲ್ಲಿ ತೊಡಗಿದೆ.

''ಅಮೃತಸ್ಯ ದೇವಧಾರಣೋಭೂಯಾಸಂ," ಅಮೃತ ಪ್ರಾಪ್ತಿಗಾಗಿ ದೇವನನ್ನು ಧರಿಸುತ್ತೇನೆ.' ಎಂದು ಮುಂತಾದ ಶ್ರುತಿಗಳಲ್ಲಿ ಪರಶಿವ ಬ್ರಹ್ಮದ ಧ್ಯಾನ ಧಾರಣ ಶ್ರವಣ ಮನನಯುಕ್ತ ಜ್ಞಾನಗಳಿಂದಲೇ ಮೋಕ್ಷವನ್ನು ಹೇಳಲಾಗಿದೆ. "ಕರ್ಮದಿಂದಲೂ ಧನ ಸಂತಾನಗಳಿಂದಲೂ ಅಮೃತವು ದೊರಕುವದಿಲ್ಲ. ಆದರೆ ಅವುಗಳ ತ್ಯಾಗದಿಂದ ಅದು ದೊರಕಬಲ್ಲದು.".... ಶ್ರುತಿಗಳಲ್ಲಿ ಬ್ರಹ್ಮಜ್ಞಾನವನ್ನಿಚ್ಛಿಸುವವರಿಗೆ ಕರ್ಮತ್ಯಾಗವನ್ನು ಹೇಳಲಾಗಿದೆ ಎಂದು ಶ್ರೀಕರ ಭಾಷ್ಯದ ಅಧ್ಯಾಯ ೩. ಪಾದ ೪. ರಲ್ಲಿ ಹೇಳಲಾಗಿದೆ, ೩೪ Smriti also declares that men not belonging to an **asrama** grow in knowledge through prayer and the like,-38. And there is the promotion (of knowledge) through special acts (of duty).

The above conclusion is founded not only on Reasoning and **Smriti**; but scripture even directly states that knowledge is benefitted by practices not exclusively prescribed for the **asramas**, 'By penance, abstinence, faith, and knowledge he is to seek the self. (Pr. up. I. 10). ಇದಕ್ಕೆ ವ್ಯತಿರಿಕ್ತವಾಗಿ '**A Brahmana** is to remain outside the **asrama** not even for one day'. ಎಂದು ಸ್ಮೃತಿಯು ಹೇಳುತ್ತದೆ. ತಪ, ದಾನ ಮುಂತಾದವುಗಳು ಆಶ್ರಮ ಧರ್ಮದಿಂದ ಮುಕ್ತವಾದಂಥವರಿಂದ ಆಚರಿಸಬೇಕಾದಂಥವುಗಳು ಎಂಬುದು ಬ್ರಹ್ಮಸೂತ್ರ ಶ್ರೀ ಭಾಷ್ಯಾಭಿಪ್ರಾಯವಿರುತ್ತದೆ.೩೫

---

೩೪ George Thibaut, Vedanta Sutras with Ramanujas commentary. pp 7o4-5 Motilal Banarsi Das (1976).

೩೫, ಸ್ವಾಮಿ ಆದಿದೇವಾನಂದ ಬ್ರಹ್ಮಸೂತ್ರ ಭಾಷ್ಯ ನೋಡಿರಿ,

ಈ ರೀತಿಯಲ್ಲಿ ವೇದಕರ್ಮಗಳನ್ನು ಮುಕ್ತಿಗಾಗಿ ನಿರಾಕರಿಸಲಾಗಿರುವದನ್ನು ಬ್ರಹ್ಮ ಸೂತ್ರ ಭಾಷ್ಯಕಾರರು 'ನಕರ್ಮಣಾ' ಎಂಬ ಶ್ರುತಿಯಾಧಾರದಿಂದ ಹೇಳಿ ವೇದಕರ್ಮನಿಂದೆ ಮಾಡಿದ್ದಾರೆ. ಇದು ಬ್ರಹ್ಮ ಸೂತ್ರದ ಅಶ್ರೌತತೆ.

**ಭಗವದ್ಗೀತೆಯು ಅಶ್ರೌತತೆ :**

ಉಪನಿಷದುಗಳೆಂಬ ಗೋವುಗಳ ಕ್ಷೀರವೆಂದು ಪ್ರಸಿದ್ಧಿಪಡೆದುದು ಭಗವದ್ಗೀತೆಯು. ಉಪನಿಷತ್ತುಗಳ ದೃಷ್ಟಿಕೋನವೇ, ಆದುದರಿಂದ, ಭಗವದ್ಗೀತೆಯ ದೃಷ್ಟಿಕೋನವಾಗಿರುತ್ತದೆ. ಅಂದರೆ ಇದೂಕೂಡ ಅಶ್ರೌತ ಮನೋಧರ್ಮವುಳ್ಳದೇ ಆಗಿದೆ. ಭಗವದ್ಗೀತೆಯು ವೇದವನ್ನು ಕುರಿತು ಹೇಳಿದ್ದು ಇಂತಿದೆ.

ತ್ರೈಗುಣ್ಯ ವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।
ನಿರ್ದ್ವಂದ್ವೋ ನಿತ್ಯಸತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್॥ ಭ.ಗೀ.೨.೪೫.

ವೇದವು ಸತ್ವ ರಜ ಮತ್ತು ತಮಗಳೆಂಬ ಪ್ರಕೃತಿ ಗುಣಗಳಾಧಿಕ್ಯಯುಕ್ತವಾಗಿದೆ. ಈ ಗುಣರಾಹಿತ್ಯವು ವೇದದಿಂದ ವಿಮುಖತೆಯಾಗಿರುತ್ತದೆ. ದ್ವಂದ್ವಮಯುವಾದ ಈ ವೇದವನ್ನು ತ್ಯಜಿಸಬೇಕು. ಇಲ್ಲವಾದರೆ ದ್ವಂದ್ವಮಯುವಾಗಬೇಕಾಗುತ್ತದೆ, ಗುಣಾಧಿಕ್ಯಪೂರಿತನಾಗಿ ದುಃಖಕ್ಕೀಡಾಗಬೇಕಾಗುತ್ತದೆ. ಇದು ಆತ್ಮಗುಣವಾಗಲಾರದು. ಪ್ರಕೃತಿ ಗುಣಗಳಿಂದ, ದ್ವಂದ್ವದಿಂದ ಮುಕ್ತವಾಗಿರುವುದೇ ಅಸ್ಪರ್ಶ ಯೋಗವು. ಅಸ್ಪರ್ಶಯೋಗಸಿದ್ಧಿಬೇಕಾದರೆ ವೇದದಿಂದ ಮುಕ್ತಿ ಬೇಕು ಎಂಬುದನ್ನು ಭಗವದ್ಗೀತೆಯಲ್ಲಿ ನೋಡುತ್ತೇವೆ. ಇದು ಭಗವದ್ಗೀತೆಯ ವೇದ ನಿಂದನೆಯಾಗಿದೆಯಾಗಿ ಇದು ಭಗವದ್ಗೀತೆಯ ಅಶ್ರೌತತೆಯಾಗಿದೆ. ಬೇರೆಡೆಯಲ್ಲಿ ಭಗವದ್ಗೀತೆಯು ವೇದನಿಂದನೆ ಮಾಡಿದ್ದು ಇಂತಿದೆ–

ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ
ಮರ್ತ್ಯಲೋಕಂ ವಿಶನ್ತಿ ।
ಏವಂ ತ್ರಯೀಧರ್ಮಮನುಪ್ರಪನ್ನಾ ಗತಾಗತಂ ಕಾಮಕಾಮಾ ಲಭಂತೇ ॥
ಭ. ಗೀ. ೯.೨೧.

Having enjoyed the vast world of heaven, they return to the world of mortals on the exhaustion of their merits; thus abiding by the injunctions of the three Vedas, desiring objects of desires they go and come. ಇದೇ ಪುನರಪಿ ಜನನ ಮತ್ತು ಪುನರಪಿ ಮರಣವಾಗಿ ಸಂಸಾರ ಚಕ್ರದಲ್ಲಿ ಸಿಲುಕುವ ದಾರಿ; ಇದೇ ಬ್ರಹ್ಮಚಕ್ರ ಅಥವಾ ಭವಚಕ್ರ. ಇದು ವೇದದಿಂದುಂಟಾಗುವ

ಫಲ. ಅಂದರೆ ವೇದತ್ರಯದ ವಿಧಿಗನುಸರಿಸಿ ಮಾಡಿದ ಕರ್ಮದಿಂದಾಗಿ ದೊರೆತ ಪುಣ್ಯದ ಫಲವನ್ನು ವಿಶಾಲವಾದ ಸ್ವರ್ಗದಲ್ಲಿ ಅನುಭವಿಸಿದ ಮೇಲೆ, ತಾವು ಗಳಿಸಿದ ಪುಣ್ಯವು ತೀರಲಾಗಿ, ಆ ಜನರು ಮರ್ತ್ಯರಲೋಕಕ್ಕೆ ಹಿಂದಿರುಗುವರು. ಅವರು ಹೀಗೆ ಭೂಮಿಯಿಂದ ಸ್ವರ್ಗಕ್ಕು, ಸ್ವರ್ಗದಿಂದ ಭೂಮಿಗು ಹೋಗಿ ಬರುವದರಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುತ್ತಾರೆ. ಇದು ತ್ರಯೀ ಕರ್ಮದಿಂದ ವಿಮುಖ ವಾಗಲು ಮಾಡಿದ ಬೋಧೆಯಾಗಿರುತ್ತದೆ. ವೇದ ಕರ್ಮಗಳ ಬದಲು ಭಕ್ತಿ ಜಪ ಧ್ಯಾನ ಯೋಗಗಳನ್ನು ಭಗವದ್ಗೀತೆಯು ಬೋಧಿಸುತ್ತದೆ. ಹೀಗೆ ಭಗವದ್ಗೀತೆಯು ಉಪನಿಷನ್ಮಂತ್ರಗಳ ಮನೋ ಧರ್ಮವಾದ ಅಶ್ರೌತತೆಯನ್ನು ಅತ್ಯಂತ ಸ್ಪಷ್ಟ ವಾಗಿ, ಧೈರ್ಯವಾಗಿ, ಹಾಗೂ ಘಂಟಾಘೋಷವಾಗಿ ಸಾರಿರುತ್ತದೆ. ಭಗವದ್ಗೀತೆ ಯಲ್ಲಿ ಬಳಸಲಾದ 'ಯಜ್ಞ' ಎಂಬ ವೈದಿಕ ಪದವು ಅಥವಾ ಶ್ರೌತ ಪದವು ಅಶ್ರೌತ ದೀಕ್ಷೆಯನ್ನು ಹೊಂದಿದೆ.

ಹೀಗೆ ಶ್ರುತಿಯ ಅಶೌತ್ರತೆಯು ವೇದದಲ್ಲಿ ಜನಿಸಿ, ಉಪನಿಷತ್ತಿನಲ್ಲಿ ಚಿಲ್ವರಿದು ಬೆಳೆದು ಗಂಗಾ ಪ್ರವಾಹವಾಗಿ ಕಾಲಪ್ರವಾಹದೊಡನೆ ಪ್ರವಹಿಸಿದೆ ಎಂಬುದನ್ನು ನಾವು ನೋಡಿದೆವು.

## III ಶ್ರೌತ ಕರ್ಮದ ವ್ಯವಸ್ಥೆಗೆ ಪರ್ಯಾಯ ವ್ಯವಸ್ಥೆಯ ವಿಚಾರ ಸ್ಥಲ :

ಇಲ್ಲಿಯವರೆಗೆ ಶ್ರುತಿಯ ಶ್ರೌತ ಮತ್ತು ಅಶ್ರೌತ ಪದಗಳ ಹಸಿಗೆ ಮತ್ತು ಆ ಪ್ರಣಾಲಿಗಳ ಉಗಮ ಮತ್ತು ಪ್ರಗತಿಗಳ ಮೀಮಾಂಸೆಯನ್ನು ಮಾಡ ಲಾಯಿತು. ಈಗ ಇದಕ್ಕೆ ಪೂರಕವಾಗಿರುವ ಇನ್ನೊಂದು ಮಾತನ್ನು ಅರಿತು ಕೊಳ್ಳುವುದು ಅವಶ್ಯವಿರುತ್ತದೆ. ಶ್ರೌತ್ರಕ್ಕೆ ಪ್ರತಿಭಟನೆಯನ್ನು ವ್ಯಕ್ತಪಡಿಸಿದ ಅಶ್ರೌತ ಪ್ರಣಾಲಿಯು ವೈದಿಕ ಕರ್ಮವ್ಯವಸ್ಥೆಗೆ ಪರ್ಯಾಯವಾದ ವ್ಯವಸ್ಥೆ ಯೊಂದನ್ನು ಮಾಡಬೇಕಾದುದು ಅದರ ಇನ್ನೊಂದು ಅಂಗಕಾರ್ಯ. ಇದರ ವ್ಯವಸ್ಥೆ ಯನ್ನು ಮಾಡದಿದ್ದರೆ ಅದು ತನ್ನ ಕಾರ್ಯವನ್ನು ಪೂರ್ತಿಗೊಳಿಸಿದಂತೆ ಆಗದು; ಮತ್ತು ಅದು ಪೂರ್ಣಪ್ರಣಲಿಯಾಗಿ ಜನರಿಂದ ಸ್ವೀಕರಿಸಲ್ಪಡಲಾರದು, ಹಾಗೂ ಅದು ಜನಪ್ರಿಯವೂ ಆಗಲಾರದು, ಪುರಾಣ-ಹಿಂದೂಧರ್ಮವಾಗಿ ಬ್ರಾಹ್ಮಣಧರ್ಮ ವಾದವು ರೂಪುಗೊಳ್ಳುವದೂ ಅಸಾಧ್ಯವಾಗುತ್ತಿತ್ತು. ಭಾರತೀಯ ಸನಾತನತೆ ಯಲ್ಲಿರುವ ಚಿರನವೀನತೆಯು ಈ ಪೂರ್ಣ ಪ್ರಣಾಲಿಯ ಫಲವಾಗಿದೆ. ಇದು ಪ್ರಪಂಚಕ್ಕೆ ಭಾರತವು ಕೊಟ್ಟ ಅದ್ವಿತೀಯ ಕಾಣಿಕೆಯಾಗಿದೆ.

ವೇದಕಾಲದಲ್ಲಿಯ ಯಜ್ಞ ಯಾಗಾದಿಗಳು ಮತ್ತು ಅವುಗಳ ಇತರೇ ಸಹಕಾರಿ ಕರ್ಮಗಳು ಭರದಿಂದ ಹುಲಸಾಗಿ ಭಾರತೀಯ ಬದುಕಿನಲ್ಲಿ ಬೆಳೆದು ಬಂದಂತೆ, ಅದರ

ಅನುಯಾಯಿಗಳು ಮತ್ತು ಅದರ ಪ್ರತಿಪಾದಕರು ಅಧಿಕಾರದ ಗದ್ದುಗೆಯನ್ನು ಏರಿ ಕೊಂಡು ಶ್ರೌತ ಕರ್ಮಗಳಿಗೆ ಹೆಚ್ಚಿನ ಪ್ರಾಶಸ್ತ್ಯೆಯನ್ನು ಹಾಗೂ ಚಾಲನೆಯನ್ನು ಕೊಟ್ಟುದು ಉಂಟು. ಇದೇ ಕಾಲಾವಧಿಯಲ್ಲಿ ವೇದವನ್ನು ನಿಂದನೆಮಾಡುವ, ಧ್ವಂಸಮಾಡುವ ಮಹಿಮರೂ ತಲೆಯನೆತ್ತದಿರಲಿಲ್ಲ. ಈ ಕಾರ್ಯದಲ್ಲಿ ತೊಡಗಿ ದವರದೇ ಒಂದು ಪ್ರಬಲ ಶಕ್ತಿ. ಅವರದು ಅಹಿಂಸಾತ್ಮಕ ಧರ್ಮಕಾರ್ಯ, ಸುಸಂಸ್ಕೃತೀ ಪ್ರಸರಣ ಕಾರ್ಯ. ಇವರಿಂದ ಇವುಗಳ ತಂತ್ರಜಾನ್ನವು ಸ್ವತಂತ್ರವಾಗಿ ಪ್ರವೃ ದ್ಧಿಯೂ ಆಯಿತು, ವೇದ ಕರ್ಮತಂತ್ರಜ್ಞಾನದೊಡನೆ ಸೆಣಸುತ್ತ ನಡೆಯಿತು. ಋಗ್ವೇದದಲ್ಲಿಯ ರುದ್ರ ಕೇಶಿಗಳು ಮುನಿಗಳು, ಅಥರ್ವವೇದದಲ್ಲಿಯ ವ್ರಾತ್ಯ ಹಾಗೂ ಆತನ ಛಾತ್ರರು, ವಾಮದೇವ ಪಿಪ್ಪಲಾದ ಅಂಗೀರಸ ಸ್ವೇತಾಶ್ವತರ ಮೊದಲಾದ ಋಷಭರುಗಳು ಮತ್ತು ಅವರ ಗುಣಸಮೂಹವು ಈ ಭಿನ್ನ ವ್ಯವ ಸ್ಥೆಯ ತಂತ್ರಜ್ಞಾನಿಗಳಾಗಿದ್ದವರು. ಈ ಯೋಗಿಗಳು ಭಾರತ ದೇಶಾದ್ಯಂತ ಸಂಚರಿಸುತ್ತ ಅದನ್ನು ಸುಪ್ರತಿಷ್ಠಾಪಿಸಿದರು. ಈ ಮಹಾವಿಜ್ಞಾನದ ಗಂಗಾಪ್ರ ವಾಹವು ವೇದ ಪೂರ್ವಕಾಲದಿಂದಲೂ ಶಿವನ ಜಟಾಜೂಟದಿಂದ ಪ್ರವಹಿಸುತ್ತ ಬದಿಂದೆ; ಮೃತಜನಾಂಗವನ್ನು ಅಮೃತ ಪುತ್ರರನ್ನಾಗಿ ಮಾರ್ಪಡಿಸಿದ ಶ್ರೇಯಸಿಗೆ ಪಾತ್ರವಾಗಿದೆ. ಋಗ್ವೇದಾದಿ ವೇದಗಳಲ್ಲಿ, ನಿಷತ್ತುಗಳಲ್ಲಿ ಹಂತಹಂತವಾಗಿ ತನ್ನ ಪ್ರಾಬಲ್ಯವನ್ನು ಮೆರೆದಿದೆ. ಏಕಾದಶೋಪನಿಷತ್ತುಗಳಲ್ಲಂತೂ ಯಜ್ಞಕ್ಕೆ ಕೂಡ ಯೋಗ ಪರವಾದ ಅರ್ಥವನ್ನು ಕೊಟ್ಟುದು ಅದರ ಮಹತಿಗೆ ಸಾಕ್ಷಿ. ಅಶ್ರೌತ ಸಾಧನಗಳ ತಂತ್ರಜ್ಞಾನವನ್ನು ಅರಿತಮೇಲೆ ಬೇರೆಡೆ ಅಂದಿನವರು ಹರಿಯಲಿಲ್ಲ ವೆಂಬುದು ಅದರ ಮಹತಿಯನ್ನೆ ದೃಢಪಡಿಸುತ್ತದೆ. ಇದು ಶ್ರೌತಕ್ಕೆ ಅಸ್ವೀಕಾ ರಾರ್ಹ ವಿದ್ಯೆ. ಛಾಂ. ಉ.ನ. ೩.೧೭.೪-೬;

ಅಥ ಯತ್ತಪೋ ದಾನಮಾರ್ಜವಮಹಿಂಸಾ ಸತ್ಯವಚನಮಿತಿ ತಾ ಅಸ್ಯ ದಕ್ಷಿಣಾ ।

[ಇಲ್ಲಿ ತಿಳಿಸಲಾದ ತಪ ದಾನ ಆರ್ಜವ ಅಹಿಂಸಾ ಸತ್ಯಗಳು ಕೊಡಬೇಕಾದ ಕಾಣಿಕೆಗಳು.... ]

ಬೇರೆ ಸಾಧನದೆಡೆ ಹೊರಳದಿರುವದಕ್ಕೆ ಸಾಕ್ಷಿ:

ತದ್ಧೈತದ್ ಘೋರ ಆಙ್ಗೀರಸಃ ಕೃಷ್ಣಾಯ ದೇವಕೀ ಪುತ್ರಾಯೋ
ಕ್ತ್ವೋವಾ ಚಾಪಿಪಾಸ ಏವಸತು
ಬಭೂವ ಸೋಽನ್ತ ವೇಲಾಯಾ ಮೇತತ್ ತ್ರಯಂ ಪ್ರತಿಪದ್ಯೇತಾಕ್ಷಿ
ತಮಸ್ಯಚ್ಯುತ
ಮಸಿ ಪ್ರಾಣಸಂಗ್ ಂ ಶಿತಮಸೀತಿ ತತ್ರೈತೇ ದ್ವೇ ಋಚೌ ಭವತಃ ॥೬॥

Ghora Angirasa, after having communicated this (view of the sacrifice) to Krishna, the son of Devaki-and he never thirsted again (after other knowledge)- said : Let a man, when his end approaches, take refuge with this Triad: "Thou art the imperishable," "Thou art the unchangeable," "Thou art the edge of Prana." On this subject there are two rik verses (Rgveda VIII. 6. 30)

> ಆದಿತ್ಪ್ರತ್ನಸ್ಯ ರೇತಸಃ । ಉದ್ವಯಂ ತಮಸಸ್ಪರಿ ಜ್ಯೋತಿಃ ಪಶ್ಯಂತ ಉತ್ತರಗ್ಂ ಸ್ವಃ ಪಶ್ಯನ್ತ ಉತ್ತರಂ ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮ ಮಿತಿ ಜ್ಯೋತಿರುತ್ತಮಮಿತಿ ॥೭॥

Then they see (within themselves) the ever present light of the old seed (of the world, the sat), the highest, which is lighted in the brilliant (Brahman) Rig. veda I. 50. 10- 'Perceiving above the darkness (of ignorance) the higher light (in the sun) as the higher light within the heart, the bright source (of light and life) among the gods, we have reached the highest light, yea, the highest light.' ಅಂತರಂಗದ ಜ್ಯೋತಿಯ ಸಾಕ್ಷಾತ್ಕಾರದ ವಿಚಾರವಿದು. ಇದು ವೇದವೆನಿಸಿಕೊಂಡ ಮಂತ್ರ ಮತ್ತು ಬ್ರಾಹ್ಮಣಗಳ ಉಪದೇಶಗಳಿಂದ ಅವುಗಳ ಅನುಷ್ಠಾನಗಳಿಂದ ಭಿನ್ನವಾದಂಥ ಸಿದ್ಧಿಯಾಗಿರುತ್ತದೆ. ಇದು ಯೋಗಸಿದ್ಧಿಯಾಗಿದೆ. ಇದು ಉಪನಿಷತ್ತಿನ ಗುಹ್ಯ ವಿದ್ಯೆ. ಅನುಭವಿಗಳು ಭವ್ಯಬೆಳಗನ್ನು ಕಂಡು ಆನಂದ ಭರಿತರಾಗಿ ಉದ್ಘೋಷಿಸಿದ್ದಾರೆ. ಮತ್ತು ಉಳಿದವರ ಕಣ್ಣುಗಳು ಅತ್ತ ಹೊರಳುವಂತೆ ಮಾಡಿದ್ದಾರೆ. ಹೀಗೆ ಅವರು ಪರ್ಯಾಯ ವ್ಯವಸ್ಥೆಯ ವಿಚಾರ ಪ್ರಬೋಧಿತರಾಗಿ ಆ ಕಾರ್ಯದಲ್ಲಿ ಮಗ್ನರಾದರು. ಹಾಗೂ ಅದೊಂದು ವಿಜ್ಞಾನ ತಂತ್ರಜ್ಞಾನವಾಗಿ ರೂಪುಗೊಳಿಸಲು ನಿರತರಾದರು. ಆ ವ್ಯವಸ್ಥೆಯು ಒಂದು ಪರಂಪರೆಯಾಗಿ ಪ್ರಸಿದ್ಧಿ ಪಡೆಯಿತು. ಈಗ ಈ ಪರ್ಯಾಯ ವ್ಯವಸ್ಥೆಗೆ ಸೇರಿದ ಸಾಧನಗಳ ಹಾಗೂ ಪರಂಪರೆ ಬಗ್ಗೆ ಏನು ಅರಿತುಕೊಳ್ಳಲು ಸಾಧ್ಯವೆಂಬುದನ್ನು ನೋಡೋಣ.

**ಉಪನಿಷತ್ತುಗಳಲ್ಲಿ ಅಶ್ರೌತ ಸಾಧನಗಳು ಮತ್ತು ಪರಂಪರೆ :**

ಉಪನಿಷತ್ತುಗಳ ಸಾಧನಗಳು ಅವುಗಳ ತಾತ್ತ್ವಿಕ, ಆಧ್ಯಾತ್ಮಿಕ ಬದುಕಿನ ದೃಷ್ಟಿಕೋನಗಳಿಗೆ ಅನುಗುಣವಾಗಿರುತ್ತವೆ. ಈ ಸಾಧನಗಳು ಉಪನಿಷತ್ ದರ್ಶನದ

ಸಿದ್ಧಿಯನ್ನು ಅಂಗಕಳವಡಿಸಿಕೊಳ್ಳುವ ಪ್ರಯೋಗ ಶಾಲೆಗಳಾಗಿವೆ. ಇದೇ ಅವುಗಳ ಪರಮೋಚ್ಚ ಪ್ರಯೋಜನ. ಈ ಸಾಧನಗಳಲ್ಲಿ ಉಪಾಸನೆಗಳು, ಯೋಗ, ಭಕ್ತಿ, ಆತ್ಯಾಶ್ರಮ ಸೇರುತ್ತವೆ. ಇವು ಬಹು ಮುಖ್ಯವಾದವುಗಳು. ಆಸ್ತಿಕದರ್ಶನಗಳಲ್ಲಿ ಮೀಮಾಂಸಾ ದರ್ಶನವೊಂದನ್ನುಳಿದು ಉಳಿದೆಲ್ಲ ಆಸ್ತಿಕ ದರ್ಶನಗಳು ಯೋಗ ತಂತ್ರವನ್ನು ತಮ್ಮ ತಮ್ಮ ಪ್ರಾಯೋಗಿಕ ಅನಿವಾರ್ಯ ಅಂಗವೆಂಬಂತೆ ಸ್ವೀಕರಿಸಿವೆ. ಅದೇ ರೀತಿ ನಾಸ್ತಿಕ ದರ್ಶನಗಳಲ್ಲಿ ಚಾರ್ವಾಕವನ್ನುಳಿದು ಬೌದ್ಧ, ಜೈನ ದರ್ಶನ ಪ್ರಭೇದಗಳು ಯೋಗ ತಂತ್ರವನ್ನು ಸ್ವೀಕರಿಸಿವೆ. 'ಭಕ್ತಿ'ಯನ್ನು ದೇವರಲ್ಲಿ ನಂಬುಗೆಯುಳ್ಳ ಆಸ್ತಿಕ ದರ್ಶನಗಳೆಲ್ಲ ಸ್ವೀಕರಿಸಿವೆ. ಭಕ್ತಿಯು ಇತರ ಉಪನಿಷತ್ತುಗಳಲ್ಲಿ ಉಪಾಸನೆಯ ಹೆಸರಿನಲ್ಲಿ ಧ್ವನಿತವಾಗಿದೆ. ಶ್ವೇತಾಶ್ವತರೋಪ ನಿಷತ್ತಿನಲ್ಲಿ ಊಹೆಗೆ ಸ್ವಲ್ಪವೂ ಅವಕಾಶ ಬಿಡದೆ ಸ್ಪಷ್ಟವಾಗಿ ಪ್ರತಿಪಾದಿತವಾಗಿದೆ. ಬೌದ್ಧ ಧರ್ಮದ ಮೇಲೆ ಈ ಉಪನಿಷತ್ತಿನಪ್ರಭಾವ ಬಹಳ.ಶರಣಂ, ಪ್ರಪದ್ಯೇ ಎಂಬ ಮಾತುಗಳು ಕೂಡ ಭಕ್ತಿಯ ಸರ್ವೋಚ್ಚ ಸ್ಥಿತಿಗೆ ಸಾಕ್ಷಿಯಾಗಿದೆ. 'ಯೋಗ' ವೆಂದರೆ ಕೂಡುವುದು, ಹೂಡುವುದು, ಸಮರಸವಾಗುವುದು ಎಂಬರ್ಥಗಳನ್ನು ಕೊಡುವಂತೆ ವಿಯೋಗ ಅಥವ ಅಗಲುವಿಕೆ ಎಂಬ ಅರ್ಥವನ್ನು ಕೊಡುತ್ತದೆ. ಇದು ಅರ್ಥಪೂರ್ಣವಾದ ವಿಚಾರ. ಈ ಎರಡೂ ಅರ್ಥಗಳಲ್ಲಿ ಯೋಗವು ಸಿದ್ಧಿಯಾಗಿದೆ. ಎಂದರೆ ಅಣಿಮಾ, ಗರಿಮಾ, ಲಘಿಮಾ ಮೊದಲಾದ ಅಷ್ಟ ಮಹಾಸಿದ್ಧಿಗಳೆಂಬರ್ಥ ವಲ್ಲ. ಸಿದ್ಧಿಯೆಂದರೆ ಪರಬ್ರಹ್ಮ ಆತ್ಮಗಳ ಸಾಮರಸ್ಯ ಸಿದ್ಧಿ. ಇನ್ನು ಕೆಲವು ಸಲ ಕೇವಲತ್ವ ಸಂಪಾದನೆ ಮತ್ತು ನಿರ್ವಾಣ ಎಂಬ ಅರ್ಥಗಳು ಸಿದ್ಧಿಗೆ ಉಂಟು.

**ಪರಂಪರೆಯ ಪ್ರಾಚೀನತೆ :**

ಯೋಗ ಪರಂಪರೆಯ ಪ್ರಾಚೀನತೆಯನ್ನು ಋಗ್ವೇದ ಪೂರ್ವಕಾಲದಲ್ಲಿ, ಋಗ್ವೇದದಲ್ಲಿ ಗುರುತಿಸಬಹುದು. ಇದು ಗುರು ಪರಂಪರೆಯಿಂದ ಬರುವ ಸಾಧನ ವ್ಯವಸ್ಥೆ. ಇದರ ಪ್ರಥಮ ಗುರು ಶಿವನು ಎಂಬುದು ಸುಪ್ರಸಿದ್ಧ. ಆರ್ಯ ಪೂರ್ವದ ಯೋಗದ ಅವಶೇಷವನ್ನು ಮೊಹೆಂಜೋದಾರೋ, ಹರಪ್ಪಾಗಳ ಸಂಸ್ಕೃತಿಯಲ್ಲಿ ಪ್ರಾಚ್ಯವಸ್ತು ವಿಜ್ಞಾನಿಗಳು ಗುರುತಿಸಿದ್ದಾರೆ. ನಂತರ ಋಗ್ವೇದದ ರುದ್ರನು ಯೋಗಿಯೆಂದು ಹೇಳುವರು. ಋಗ್ವೇದದ ಮಂತ್ರ x. 136 ವು ಯೋಗದ ಪದ್ಯವೆಂದು ಭಾರತೀಯ ಮತ್ತು ಪಾಶ್ಚಿಮಾತ್ಯ ವಿದ್ವಾಂಸರುಗಳು ಗುರುತಿಸಿವುದುಂಟು.[೩೭] ಮಹಾತ್ಮಾ ಬಸವಣ್ಣನವರು ರುದ್ರನ ಯೋಗವು ಅಣಿಮಾದಿ

---

೩೭. Dr. R.D. Ranade, A Constructive survey of Upanisadic philosophy
Dr. A. B. Keith. Religion and Philosophy of the Vedas
ಗೂಳುರ ಸಿದ್ಧವೀರಣ್ಣೊಡೆಯರು. ಶೂನ್ಯಸಂಪಾದನೆ

ಸಿದ್ಧಿಗಳ ಯೋಗವೆಂದು ಗುರುತಿಸಿದ್ದಾರೆ. ಋಗ್ವೇದದ ಕಾಲದಲ್ಲಿ ಯೋಗ ವಿಜ್ಞಾನದ ಪ್ರಸಾರವಾಗಿತ್ತೆಂಬುದನ್ನು ಅದರ ಉಲ್ಲೇಖವು ಇದನ್ನು ತಿಳಿಸಿದ ಋಕ್ಕುಗಳೊಂದೆರಡರಲ್ಲಿ ೩೮ ಇರುವದನ್ನು ಗುರುತಿಸಬಹುದು. ರುದ್ರನ ಅನುಯಾಯಿಗಳದು ಬಹುದೊಡ್ಡ ಸಂಖ್ಯೆ ಎಂಬುದನ್ನು ಕೌಷೀತಿಕಿಬ್ರಾಹ್ಮಣ ಮತ್ತು ಶತಪಥ ಬ್ರಾಹ್ಮಣಗಳು 'ಗಂಗೆವಾಳುಕಸಮ' ಎಂಬ ಪದ ಬಳಸುವ ಮೂಲಕ ತಿಳಿಸುವವು. ಇದನ್ನು ಬಸವಣ್ಣನವರ ವಚನದಲ್ಲಿಯೂ ನೋಡುತ್ತೇವೆ. ಋಗ್ವೇದವು ರುದ್ರನು, ಅವನ ಅನುಯಾಯಿಗಳಾದ ಕೇಶಿಗಳು, ಮುನಿಗಳು ಯೋಗಸಿದ್ಧಿಯ ಸುಖಲೋಲುಪರಾಗಿದ್ದರೆಂದು ತಿಳಿಸಿದರೆ; ಅಥರ್ವಣವೇದವು ಮಹಾವ್ರಾತ್ಯನು ಮತ್ತು ಆತನ ಅನುಯಾಯಿಗಳು ಆರ್ಯ ಅಗ್ನಿಯ ಸಂಪರ್ಕವಿಲ್ಲದ ಪೂರ್ವ ಭಾರತದಲ್ಲಿ ಇದ್ದುದನ್ನು ಮತ್ತು ಯೋಗ ಮಹಿಮೆಯಿಂದ, ಯೋಗ ಬಲದಿಂದ ವಿಜಯ ಸಂಪಾದನೆಗಳನ್ನು ಮೆರೆದುದನ್ನು ತಿಳಿಸುತ್ತದೆ. ಅಥರ್ವಣವೇದದ ಉತ್ತಮತಮ ಧರ್ಮವನ್ನು ಕುರಿತು ಬರೆಯುತ್ತ ಋಗ್ವೇದ ಧರ್ಮಕ್ಕಿಂತ ಮುಂದುವರೆದದ್ದು ಎಂದು ತಿಳಿಸುವದು ಇಂತು ಇರುತ್ತದೆ–

It is more advanced in some parts than the Rgveda, and has certain elements in common with the Upanisads, ....Rudra is the lord of animals, and forms the point of linkage between the Vedic religion and the later Siva worship .... Brahmaloka is mentioned in the Atharva-Veda (XIX. 71.1) ಇಲ್ಲಿ ಐಕ್ಯದ ವಿಚಾರವು ಸ್ಪಷ್ಟ ಮಾಡಲ್ಪಟ್ಟಿದೆ. ವ್ರಾತ್ಯರನ್ನು ಕುರಿತು ವಿದ್ವಾಂಸರು ಹೀಗೆ ತಿಳಿಸುತ್ತಾರೆ– They were yogis in the main and worshipped God in his aspect of Rudra. They seem to have adopted the dress of the nomads and even God was invested by a sort of psychical transfer based on the concept of the atonment of the worshipper, and the worshipped, with some of these trappings.೩೯ ಈ ವಿವರಣೆಯ

---

೩೮. Yoge yogetavastavam vaje vajehavamahel
sakhayaindra mulaye II Rav. VI. 30. 8
yasmadrtena siddhyati yajnohapascitascanal
sa dhina myogaminvati II Rgv.V. 19. 8

೩೯. Dr. Sampurnananda. Pippalad Samhite Ganesh & comp Madras.

ಪ್ರಕಾರ ಬ್ರಾಹ್ಮಣಗಳು ತಿಳಿಸಿದಂತೆ ಪೂರ್ವಭಾರತ ನಿವಾಸಿಗಳಾದ ಇವರು ವ್ರಾತ್ಯರು. ಇವರು ಯೋಗ ವಿಜ್ಞಾನ ಪರಿಣತರು. ಇವರು ಈ ವಿದ್ಯಾದೀಕ್ಷೆ ಹೊಂದಿ ಶಿವನ ಪ್ರತೀಕ ಧಾರಿಗಳು. ತಾವು ಮತ್ತು ತಮ್ಮ ದೇವರಾದ ಮಹಾವ್ರಾತ್ಯ ಪ್ರರಬ್ರಹ್ಮ ದೊಡನೆ ಐಕ್ಯಸಿದ್ಧಿಗಾಗಿ ದೇವಧಾರಣೆ ಮಾಡಿದವರೆಂದು ಭಾವಿಸಿದವರು. ಸೈಂಧವ ನಾಡಿನಲ್ಲಿದ್ದ ಜನಾಂಗವು ಲಿಂಗೋಪಾಸಕರೆಂದೂ, ಅವರು ಆರ್ಯರಿಗೆ ಸೋತು ಬೇರೆಡೆ ಚದುರಿದವರಲ್ಲಿ ಪೂರ್ವಭಾರತದಲ್ಲಿ ಇರುವ ಇವರೂ ಒಬ್ಬರೆಂಬ ಒಂದು ಅಭಿಪ್ರಾಯವೂ ಇದೆ. ಈ ಅಭಿಪ್ರಾಯದಂತೆ ಇವರು ವರ್ಣಾಶ್ರಮಿಗಳಲ್ಲ. ಇವರದು ಅತಿವರ್ಣಾಶ್ರಮ ಪರಂಪರೆಯೆ ಸೈ. ಮಹಾಭಾರತವು ಕೂಡ ಪೂರ್ವ ಭಾರತ ನಿವಾಸಿಗಳೂ ಬುದ್ಧನ ಪೂರ್ವ ಕಾಲದವರೂ ಆದ ಅನೇಕ ಯೋಗಿಗಳನ್ನು ತಿಳಿಸುತ್ತದೆ. ಋಷಭ ಯೋಗಾಚಾರ್ಯರೆಂದು ಪ್ರಸಿದ್ಧಿ ಪಡೆದವರಲ್ಲಿ ಶ್ರೀಕಂಠ, ಪಂಚಶಿಖಾ, ಜೈಗೀಷವ್ಯಾದಿಗಳು ಪೂರ್ವಭಾರತ ನಿವಾಸಿಗಳು. ಪೂರ್ವ ಭಾರತವೆಂದರೆ ಬಿಹಾರ, ಓಡಿಸಾ, ಬಂಗಾಲಗಳ ಪ್ರದೇಶ. ಇವರ ಶಿಷ್ಯ ಅಸಿತನು. ಆತನು ಸಿದ್ಧಾರ್ಥನು ಹುಟ್ಟಿದಾಗ ತುಂಬಾ ವೃದ್ಧ. ಈತನನ್ನು ಸಿದ್ಧೋಧನನು ರಾಜ್ಯಗುರುವೆಂದು ಬಗೆದಿದ್ದನು. ಇವನನ್ನು ಸಿದ್ಧಾರ್ಥನು ಹುಟ್ಟಿದಾಗ ಕರೆಯಿಸಿಕೊಂಡ ವಿಚಾರವನ್ನು ಅಶ್ವಘೋಷನು ಬುದ್ಧ ಚರಿತ್ರೆಯಲ್ಲಿ ಬರೆಯುತ್ತಾನೆ. ಇವರ ಪೂರ್ವದ ಶ್ರೀಕೃಷ್ಣನಿಗೆ ಶಿವಯೋಗ, ಶಿವಧರ್ಮ ರಹಸ್ಯ ತಿಳಿಸಿದ ಉಪಮನ್ಯು ಶೈವಮತಧರ್ಮದ ಮಹಿಮಾವಂತ ಯೋಗಿ, ಒಬ್ಬ ಶೈವರ್ಷಿ ಎಂದು ಮಹಾಭಾರತವು ತಿಳಿಸುತ್ತದೆ.

ಉಪನಿಷತ್ತುಗಳು ಕೂಡ ರುದ್ರ, ರುದ್ರ-ಶಿವ, ಷಣ್ಮುಖ, ಸನತ್ಕುಮಾರ ಹಿರಣ್ಯಗರ್ಭ, ವಾಮದೇವ, ಪಿಪ್ಪಲಾದ, ಶ್ವೇತಾಶ್ವತರ, ಮುಂತಾದವರ ಹೆಸರುಗಳನ್ನು ತಿಳಿಸುತ್ತವೆ. ಜೈಗೀಷವ್ಯನು ಧಾರಣ ಶಾಸ್ತ್ರವೆಂಬ ಯೋಗಪರ ಶಾಸ್ತ್ರ ರಚಿಸಿದ್ದನೆಂದು ತಿಳಿದು ಬರುತ್ತದೆ. ಪೂರ್ವಭಾರತ ನಿವಾಸಿಗಳಾದ ಈ ಋಷಿ, ಮುನಿಗಳು ಅಹಿಂಸೆ ಮತ್ತು ತಪಶ್ಚರ್ಯೆಗೆ ಹೆಸರಾದವರು. ಇವರ ಪ್ರಭಾವದಿಂದ ಅಲ್ಲಿಯ ಜನರು ಅಹಿಂಸೆ ಮತ್ತು ತಪಶ್ಚರ್ಯಗಳಿಗೆ ಮಹತ್ವ ಕೊಡುವವರಾ[೧]

೪೦. "ಗಣಪತಿಯನತೆ ಷಣ್ಮುಖನೂ ಈಶ್ವರನ ಪುತ್ರನು. ದಿವ್ಯಜ್ಞಾನಿಯು. ಅನೇಕ ವೇಳೆ ಋಷಿ ಮುನಿಗಳಿಗೆ ಈತನುತ್ತತ್ತೋಪದೇಶವನ್ನು ಮಾಡಿರುತ್ತಾನೆ. ತಾನು ಸ್ವತಃ ಪರಮೇಶ್ವರನಿಂಡ ತತ್ತ್ವ ವಿಚಾರವನ್ನು ಶ್ರವಣ ಮಾಡಿರುತ್ತಾನೆ. ಒಮ್ಮೆ ಸನತ್ಕುಮಾರ ಋಷಿಗಳ ರೂಪದಿಂದ ನಾರದರಿಗೆ ಭೂಮವಿದ್ಯೆಯೆಂಬ ಹೆಸರಿನಿಂದ ಬ್ರಹ್ಮೋಪದೇಶವನ್ನು ಮಾಡಿದನೆಂದು ಛಾಂದೋಗ್ಯ ಉಪನಿಷತ್ತಿನಲ್ಲಿದೆ." ನೋಡಿ ಮಹಾ ನಾರಾಯಣೋಪನಿಷತ್. ಪು. ೩೮. ಅಧ್ಯಾತ್ಮ ಪ್ರಕಾಶನ ಕಾರ್ಯಾಲಯ ಹೊಳೆ ನರಸೀಪುರ (೧೯೪೯)

೪೧. T. G. Mainkar The Sankhya Karika of Iswarakrishna (eng. tr) p. 18. Oriental Book Agency (1964).

ಗಿದ್ದರು. ಅಂತರಂಗ ಬಹಿರಂಗ ಶುದ್ಧಿ ಸಾಧನಗಳನ್ನು ಅನುಷ್ಠಾನಗೊಳಿಸಿದ ಇವರು ತಮ್ಮ ದೇವರು ಮಖಾರಿ ಅಥವ ಯಜ್ಞ ಭಂಜಕನೆಂದು ವರ್ಣಿಸಿದವರು. ಯಜ್ಞ ವಿರೋಧಿಗಳಾದ ಇವರೂ ರುದ್ರ ಅಥವ ಶಿವನ ಅನುಯಾಯಿಗಳಾಗಿದ್ದರೆ, ಇನ್ನು ಕೆಲವರು ಯಜ್ಞಪತಿಯಾಗಿದ್ದಾನೆ ತಮ್ಮ ದೇವರಾದ ರುದ್ರನು, ಶಿವನು ಎಂಬುವವರೂ ಇರುತ್ತಾರೆ. ಇವರದು ಶ್ರೌತಧರ್ಮ ದೃಷ್ಟಿ. ಯಜ್ಞ ಭಂಜನ ಮಾಡಿದ ರುದ್ರನ ಅಥವ ಶಿವನ ಅನುಯಾಯಿಗಳಲ್ಲಿ ವೀರಭದ್ರನ ಹೆಸರು ಅತ್ಯಂತ ಪ್ರಸಿದ್ಧ. ಯಜ್ಞ ಭಂಜಕನಾದ ರುದ್ರನ ಪರಂಪರೆಯ ಶೈವರದು ಪ್ರಬಲ ವಾದ ಸಮಾಜ; ಬಹು ದೊಡ್ಡ ಸಮಾಜವಾಗಿ ಪ್ರಭಾವಪೂರ್ಣವಾಗಿದ್ದಂತೆ ತೋರು ತ್ತದೆ. ಇವರದು ಅಶ್ರೌತ ಧರ್ಮದೃಷ್ಟಿ. ರುದ್ರನ ಈ ಅನುಯಾಯಿಗಳಲ್ಲಿ ಉಪನಿಷ ತ್ತಿನ ಋಷಿಗಳಿದ್ದು, ಅವರೂ ಯಜ್ಞ ಧ್ವಂಸಕ್ಕಾಗಿ ಯುದ್ಧ ಮಾಡಿ ಯಜ್ಞಯಾಗಾದಿ ಗಳಲ್ಲಿ ತೊಡಗಿದವರನ್ನು ಸೋಲಿಸಿದನಂತರ, ಅವರ ಹೋರಾಟದ ಸಾಮರ್ಥ್ಯವು, ಪ್ರಾಬಲ್ಯವು ಕಡಿಮೆಯಾದ ಕಾಲದಲ್ಲಿ ಉಪನಿಷತ್ತುಗಳು ಬಂದು ಅಳಿದುಳಿದ ಯಜ್ಞ ಯಾಗಾದಿಗಳ ಪರತೆಯನ್ನು ಕೇವಲ ಖಂಡಿಸುವ ಮೂಲಕ, ಆ ಯಜ್ಞಗಳಿಂದ ದೊರೆವ ಸುಖವು ಕ್ಷಣಿಕವೆಂದು ತಿಳಿಸುವ ಮೂಲಕ ಅಂದರೆ. ವೈಚಾರಿಕ ಕ್ರಾಂತಿಗೈವ ಮೂಲಕ ಕರ್ಮಪ್ರವೃತ್ತಿಯಲ್ಲಿ ಬದಲಾವಣೆಯನ್ನು ಮಾಡಿದ ಅವು ಈ ನಿಟ್ಟಿನಲ್ಲಿ ಒಂದು ದಾಖಲೆಯಂತಿವೆ. ಇದಕ್ಕು ಪೂರ್ವದಲ್ಲಿ ಪ್ರಜಾಪತಿಯು ಸರ್ವೋಚ್ಚ ಸ್ಥಾನ ದಲ್ಲಿದ್ದು ತನ್ನ ಮಗಳ ಮೇಲೆ ಅತ್ಯಾಚಾರವನ್ನು ಎಸಗಲು ಹೊರಟಾಗ ಆತನನ್ನು ಶಿಕ್ಷಿಸಿ ಮೃಗರೂಪದಲ್ಲಿದ್ದ ಅವಳನ್ನು ರಕ್ಷಿಸಿ ನೀತಿಸಾಮ್ರಾಜ್ಯಾಧಿಪತಿಯಾದ ಮಹಾ ದೇವನು ಇದೇ ರುದ್ರ ಪರಂಪರೆಯವನು. ಈ ಕಾರ್ಯದ ಕುರುಹಿಗಾಗಿ ಅವನನ್ನು ಮೃಗಪಾಣಿ ಎಂಬ ಹೆಸರಿನಿಂದ ಕರೆದರು.

ಹೀಗೆ ಯಜ್ಞ ಯಾಗಾದಿಗಳನ್ನು ಭಂಜಿಸಿ, ನಂತರ ಖಂಡಿಸಿ, ವಿದ್ಯಾರ್ಜನೆಗೆ ಬ್ರಾಹ್ಮಣನಿಗೆ ಪ್ರಥಮಪ್ರಾಶಸ್ತ್ಯದಂಥ ವರ್ಣವ್ಯವಸ್ಥೆಯನ್ನು ತಿರಸ್ಕರಿಸಿ, ಗುಣಿಯೇ ಅಥವ ಸತ್ಯಕಾಮನೇ ವಿದ್ಯಾರ್ಜನೆಗೆ ಪಾತ್ರತೆಯುಳ್ಳವನೆಂಬ ಅತಿವರ್ಣಾಶ್ರಮವನ್ನು ಸ್ಥಾಪಿಸಿ, ಕರ್ಮವ್ಯವಸ್ಥೆಯಿಂದ ದೊರೆವ ಸುಖದ ಕ್ಷಣಿಕತೆಯನ್ನೆತ್ತಿ ತೋರಿಸಿ, ಅಹಿಂಸಾತ್ಮಕ ಉಪಾಸನೆಗಳನ್ನು–ಯೋಗವನ್ನು, ಭಕ್ತಿಯನ್ನು ಮುಕ್ತಿ ಎಂಬ ಶಾಶ್ವತ ಸುಖದ ಪ್ರಾಪ್ತಿಗಾಗಿ ವ್ಯವಸ್ಥೆಗೊಳಿಸಿದವರ ಪರಂಪರೆಯು ಮೊಹೆಂಜೋದಾರೋ ಹರಪ್ಪಾ ಸಂಸ್ಕೃತಿಗಳ ಕಾಲದಲ್ಲಿ, ವೇದ ಬ್ರಾಹ್ಮಣ ಮತ್ತು ಉಪನಿಷತ್ತುಗಳ ಕಾಲ ದಲ್ಲಿ ಕಾಲಾನುಕ್ರಮದಲ್ಲಿ ಉಳಿದುಕೊಂಡು ಬೆಳೆದುಕೊಂಡು ಬಂದುದನ್ನು ನೋಡು ತ್ತೇವೆ. ಈ ಪರಂಪರೆಯಲ್ಲಿಯ ಮಹಾನ್ ವ್ಯಕ್ತಿಗಳನ್ನು ಈ ಇಣುಕು ನೋಟವು ತೋರಿಸಿತೆಂದು ಹೇಳಿದರೆ ತಪ್ಪಾಗದು.

ಈಗ ಶ್ರೌತ ಪರ್ಯಾಯ ವ್ಯವಸ್ಥೆಗೆ ಪ್ರತಿಯಾದ ಅಶ್ರೌತ ವ್ಯವಸ್ಥೆಯ ಪರಾಮರ್ಶೆಯನ್ನು ಕೈಕೊಳ್ಳುವಾ. ಆಗಲೆ ತಿಳಿಸಿದಂತೆ ಉಪನಿಷತ್ತುಗಳು ಕರ್ಮಮೀಮಾಂಸಾ ಶ್ರುತಿಯ ಸಾಧನ ವ್ಯವಸ್ಥೆ ಬದಿಗಿರಿಸಿ, ಬೇರೆ ಸಾಧನ ವ್ಯವಸ್ಥೆಯನ್ನು ರೂಪಿಸಿದ್ದುಂಟು; ಇವುಗಳೆಲ್ಲ ಪೂರ್ವ ಕಲ್ಪದವರಿಂದ ಬಳುವಳಿಯಾಗಿ ಬಂದವೆಂಬುದನ್ನು ಉಪನಿಷತ್ತುಗಳು ಹೇಳುವುದು ಗಮನಾರ್ಹ ಸಂಗತಿಯಾಗಿದೆ ಚರಿತ್ರ ದೃಷ್ಟಿಯಿಂದ.

## ೧. ಉಪಾಸನೆ :

ಉಪನಿಷತ್ತುಗಳು ಅನೇಕ ಉಪಾಸನೆಗಳನ್ನು ಆತ್ಮ ಅಥವ ಬ್ರಹ್ಮ ಸಾಕ್ಷಾತ್ಕಾರಕ್ಕಾಗಿ ಪ್ರತಿಪಾದಿಸಿರುತ್ತವೆ. ಕೆಲವೆಡೆ ಉಪನಿಷದ್ವಿದ್ಯೆಯು ಪುರಾಕಲ್ಪದಲ್ಲಿಯದೆಂದು ಹೇಳುವದನ್ನು ನೋಡುತ್ತೇವೆ. ಈ ವಿದ್ಯೆಗಳೆಲ್ಲ ಗುರು ಉಪದೇಶ ಪದ್ಧತಿಯಿಂದ ಜನಾಂಗಕ್ಕೆ ಬಂದವುಗಳು. ಈ ಉಪದೇಶವು ನಡೆಯುತ್ತ ಕಾಲದಿಂದ ಕಾಲಕ್ಕೆ ಬಂದಿತು. ಆದ್ದರಿಂದ ಒಂದು ಪರಂಪರೆ ಈ ವಿದ್ಯೆಗಳನ್ನು ಉಳಿಸಿಕೊಂಡು ಬಂದಿದೆ ಎಂಬುದು ಶಂಕಾತೀತ. ಅನೇಕ ಉಪನಿಷತ್ತುಗಳು ಪಿಪ್ಪಲಾದ, ಅಂಗೀರಸ ಅಥರ್ವ ಮುಂತಾದ ಗುರು ಪರಂಪರೆಗೆ ಸೇರಿದಂಥವು ಎಂಬುದು ಕಂಡು ಬರುತ್ತದೆ. 'ಪರಂಪರೆ'ಗೆ ಬದಲಾಗಿ 'ಶಾಖೆ'ಗೆ ಎಂಬ ಪದವನ್ನವರು ಬಳಸುತ್ತಾರೆ. ಋಗ್ವೇದ, ಯಜುರ್ವೇದ, ಅಥರ್ವಣ ಮತ್ತು ಸಾಮವೇದಗಳ ಕೊನೆಯ ಭಾಗವೇ ಉಪನಿಷತ್ತು.

ಉಪಾಸನೆಗಳೇನಕರ ಉಲ್ಲೇಖವನ್ನು ಉಪನಿಷತ್ತುಗಳಲ್ಲಿ ನೋಡುತ್ತೇವೆ. ಆಚಾರ್ಯರು ಛಾಂದೋಗ್ಯೋಪನಿಷತ್ತಿನ ಅವತರಣಿಕೆಯಲ್ಲಿ ಉಪಾಸನೆಯನ್ನು ಕುರಿತು ಹೀಗೆ ತಿಳಿಸುತ್ತಾರೆ. ಶಾಸ್ತ್ರವು ಉಪದೇಶಿಸಿರುವ ಯಾವುದಾದರೊಂದು ಆಲಂಬನವನ್ನು ತೆಗೆದುಕೊಂಡು ಅದರಲ್ಲಿ ಏಕರೂಪವಾದ ಚಿತ್ತವೃತ್ತಿಯನ್ನು ಅದಕ್ಕಿಂತ ಭಿನ್ನವಾದ ಪ್ರತ್ಯಯವು ಬಾರದಂತೆ ಪ್ರಯೋಗಿಸುವುದು ಉಪಾಸನೆ. "ಉಪಾಸನಂ ತು ಯಥಾ ಶಾಸ್ತ್ರ ಸಮರ್ಪಿತಂ ಕಿಂಚಿದಾಲಂಬನಮುಪಾದಾಯ ತಸ್ಮಿನ್ ಸಮಾನಚಿತ್ತವೃತ್ತಿ ಸಂತಾನಕರಣಂ ತದ್ವಿಲಕ್ಷಣಪ್ರತ್ಯಯಾನಂತರಿತಮ್ ಇತಿ ವಿಶೇಷಃ ೪೨" ಉಪಾಸನೆಗಳು ಸತ್ವ ಶುದ್ಧಿಯನ್ನುಂಟು ಮಾಡುತ್ತವೆ. ಮತ್ತು ಅದ್ವೈತ ವಸ್ತು ಸಿದ್ಧಿಯನ್ನು ಮಾಡಿಕೊಡುತ್ತವೆ. ಆದ್ದರಿಂದ ಅದ್ವೈತ ಜ್ಞಾನಕ್ಕೆ ಉಪಕಾರವಾಗಿರುತ್ತದೆ. ಉಪಾಸನೆಯು ಆಲಂಬನವನ್ನಿಟ್ಟುಕೊಂಡುದರಿಂದ ವೃತ್ತಿ ರೂಪವಾಗಿ ಸುಲಭ ಸಾಧ್ಯವಾಗಿರುತ್ತದೆ. ಉಪಾಸನೆಯಿಂದ ಚಿತ್ತಶುದ್ಧಿಯು ಆಗುತ್ತದೆ;

---

೪೨ ಸ್ವಾಮಿ ಆದಿದೇವಾನಂದ, ಮಾಂಡೂಕ್ಯೋಪನಿಷತ್ ಮತ್ತು ಗೌಡಪಾದ ಕಾರಿಕಾ ಮೂಲ ಪದಾರ್ಥ ತಾತ್ಪರ್ಯ ಟಿಪ್ಪಣಿಗಳೊಡನೆ. ಪು. ೩೩, ಆವೃ., ೧ ಮೈಸೂರ (೧೯೫೮)

ಇದು ಚಿತ್ತದ ಕಾಲುಶ್ಯವನ್ನು ಕಳೆಯುತ್ತದೆ, ಹಾಗೂ ಅದರ ಚಾಂಚಲ್ಯವನ್ನು ಹೋಗಲಾಡಿಸುತ್ತದೆ. ಉಪಾಸನೆಯಿಂದ ಸಾಧ್ಯವಾಗುವ ಇವೆರಡೂ ಪ್ರತ್ಯಗಾತ್ಮನನ್ನರಿತುಕೊಳ್ಳುವದಕ್ಕೆ ಚಿತ್ತವನ್ನು ಅಣಿಗೊಳಿಸುತ್ತವೆ. ಇದು ಉಪಾಸನೆಯ ವಿಧಾನವನ್ನೂ, ಅದರ ಪರಿಣಾಮವನ್ನೂ, ಮತ್ತು ಚಿತ್ತಕ್ಕೆ ಉಂಟಾಗುವ ಸಾಕ್ಷಾತ್ಕಾರ ಸಿದ್ಧಿಯನ್ನೂ ತಿಳಿಸುತ್ತದೆ. ಆಲಂಬನಗಳು ಅನೇಕವಿದ್ದು ಅವುಗಳಲ್ಲಿ ಒಂದೆರಡನ್ನಿಲ್ಲಿ ಉಲ್ಲೇಖಿಸಬಹುದು-(೧) ಓಂಕಾರುಪಾಸನೆ, ಇದು ಶಬ್ದರೂಪವಾಗಿರುತ್ತದೆ. (೨) ದಹರಾಕಾಶೋಪಾಸನೆ- ಪ್ರಕಾಶರೂಪವಾಗಿರುವುದು. (೩) ಲಿಂಗೋಪಾಸನೆ ಇದು ನಿರಾಕಾರ ಬ್ರಹ್ಮ ಪ್ರತೀಕವಾಗಿರುತ್ತದೆ. ಉಪಾಸನೆಯಿಂದ ಸಗುಣ ಬ್ರಹ್ಮ ಸಿದ್ಧಿಯಾಗುವಂತೆ, ನಿರ್ಗುಣ ಬ್ರಹ್ಮ ಸಿದ್ಧಿಯೂ ಸಾಧ್ಯವಾಗುತ್ತದೆ.

ಉಪಾಸನೆಗಳಲ್ಲಿ ಎರಡು ವಿಧಗಳಿರುವದು ಗೊತ್ತಾಗುತ್ತದೆ. ಒಂದು ಬಹಿರಂಗೋಪಾಸನೆ, ಇನ್ನೊಂದು ಅಂತರಂಗೋಪಾಸನೆ. ಬಹಿರಂಗೋಪಾಸನೆಯಿಂದ ಕರ್ಮಬ್ರಹ್ಮ-ಕಾರ್ಯಬ್ರಹ್ಮ-ಪ್ರಾಪ್ತಿ. ಅಂತರಂಗೋಪಾಸನೆಯಿಂದ ಕಾರಣಬ್ರಹ್ಮ ಪ್ರಾಪ್ತಿ. ಈ ಹಲವಾರು ಉಪಾಸನೆಗಳು ರಹಸ್ಯವಿದ್ಯೆಗಳಾಗಿದ್ದು, ಅವುಗಳನ್ನು ಉಪನಿಷತ್ತುಗಳು ಮಾತ್ರ ಬೋಧಿಸಬಲ್ಲವು. ಈ ರಹಸ್ಯ ಅಥವ ಗುಹ್ಯವಿದ್ಯೆಯ ಸೂಚಕವೆಂಬಂತೆ, ಈ ಗ್ರಂಥಗಳಿಗೆ 'ಉಪನಿಷತ್' ಎಂಬ ಅನ್ವರ್ಥಕ ನಾಮವಿರುತ್ತದೆ. ಈ ವಿದ್ಯೆಗಳು ಅಥವಾ ಉಪಾಸನೆಗಳಲ್ಲದೆ ಇನ್ನೂ ಬೇರೆ ಕೆಲವು ಸಾಧನಗಳೂ ಇರುತ್ತವೆಯೆಂಬುದನಿಲ್ಲ ಮರೆಯಲಾಗದು. ಅವೂ ಕೂಡ ರಹಸ್ಯವಾದಂಥವುಗಳೇ ಆಗಿರುತ್ತವೆ. ಇವೆಲ್ಲ ಸಾಧನಗಳು ಯಜ್ಞ ಯಾಗಾದಿಗಳಂಥ ಹಿಂಸಾಮಯ ಸಾಧನಗಳಿಗೆ ಪ್ರತಿಕ್ರಿಯಿಸಿ ಬೆಳೆದು ಬಂದಂಥವುಗಳು. "ಹಿಂಸಾದಿ ಬಹುಲವಾಗಿರುವ ಆ ಕರ್ಮಗಳಿಗಿಂತಲೂ ಪರಿವ್ರಾಜ್ಯವನ್ನು ಸ್ವೀಕರಿಸಿ ಯಮ ಪ್ರಧಾನವಾಗಿರುವ ಅಮಾನಿತ್ವಾದಿಗಳ್ನೂ ಧ್ಯಾನ ಜ್ಞಾನ ವೈರಾಗ್ಯಗಳನ್ನೂ ಅಭ್ಯಾಸ ಮಾಡುವುದೇ ಮುಮುಕ್ಷುಗಳಿಗೆ ಅಂತರಂಗ ಸಾಧನವು. ೪೩ ಎಂದು ಹೇಳಿರುವುದು ಕರ್ಮಕಾಂಡಕ್ಕೆ ಉಂಟಾದ ಪ್ರತಿಭಟನೆಯ ಫಲಗಳು ಉಪನಿಷತ್ತಿನ ಸಾಧನೆಗಳು ಎಂಬುದನ್ನೇ ಸಮರ್ಥಿಸುತ್ತದೆ."

## ೨. ಯೋಗ :

ಯೋಗದ ಪುರಾತನತೆ ಮತ್ತು ಪರಂಪರೆ ಕುರಿತು ಆಗಲೆ ನೋಡಿಯಾಗಿದೆ; ಈಗ ಉಪನಿಷತ್ತುಗಳಲ್ಲಿ ಅದರ ತಂತ್ರದ ವಿವರವಾದ ಪರಿಚಯವಿರುವದನ್ನು

---

೪೩ ಉಪನಿಷದ್ಬ್ರಾಷ್ಯಗಳು ಸಂ-೫. ಛಾಂದೋಗ್ಯೋಪನಿಷತ್ ಭಾಷ್ಯದ ಪ್ರಸ್ತಾವನೆಯಲ್ಲಿ, ಅಧ್ಯಾತ್ಮ ಪ್ರಕಾಶನ ಕಾರ್ಯಾಲಯ ಹೊಳೆ ನರಸೀಪುರ (೧೯೫೫).

ತಿಳಿದುಕೊಳ್ಳಬೇಕು. ಇದು ಯಜ್ಞಕರ್ಮದಂತೆ ವೇದದಲ್ಲಿ ಉಲ್ಲೇಖವಾದರೂ, ಯಜ್ಞದ ಅಂಗಾಂಗಗಳನ್ನು ಮಂತ್ರ ಬ್ರಾಹ್ಮಣಗಳು ವಿವರ ಕೊಟ್ಟಂತೆ ಯೋಗದ ವಿವರ ಉಪನಿಷತ್ತಿನಲ್ಲಿ ಅಲ್ಲದೆ ಬೇರೆಡೆ ಲಭ್ಯವಿಲ್ಲವಾದರೂ ಅದಕ್ಕೆ ಪರ್ಯಾಯ ಸಾಧನವಾಗಿ ಅಸ್ತಿತ್ವದಲ್ಲಿದ್ದು; ಊಪನಿಷತ್ತುಗಳಲ್ಲಿ ಅನಿವಾರ್ಯವಾಗಿ ಸಾಂಗೋ ಪಾಂಗವಾಗಿ ಪ್ರತಿಪಾದನೆ ಗೊಂಡಿದೆ. ಯಜ್ಞ ಯಾಗಾದಿಗಳ ಪರಿಣತರಂತೆ ಯೋಗವಿದ್ಯೆಯ ಪರಿಣತರನ್ನು ಉಪನಿಷತ್ತುಗಳ ವಿವರಣೆಯಿಂದ ಗುರುತಿಸಲು ಸಾಧ್ಯವಿದೆ. ಯೋಗವು ಯಜ್ಞದ ಪರ್ಯಾಯ ಸಾಧನವಾಗಿ ಅದಕ್ಕಿಂತಲೂ ಶ್ರೇಷ್ಠವಾದ ಫಲದಾಯಕವಾಗಿರುವುದು ಅದರ ಮತ್ತು ಅದರ ಅನುಯಾಯಿಗಳ ಹಿರಿಮೆಗೆ ಸಾಕ್ಷಿ. ೪೪ ಉಪಾಸನೆಯಂತೆ ಹಲವು ಉಪನಿಷತ್ತುಗಳಲ್ಲಿ ಯೋಗ ವಿದ್ಯಾ ನಿರೂಪಣೆ ಇದೆ. ಕಠೋಪನಿಷತ್ತು ಯೋಗವನ್ನು ಪರಿಚಯಿಸಿದ್ದಿಂತಿದೆ–

ಆಧ್ಯಾತ್ಮಯೋಗ ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ
ಗಹ್ವರೇಷ್ಠಂ ಪುರಾಣಮ್ ।
ಅಧ್ಯಾತ್ಮ ಯೋಗಾಧಿಗಮೇನ ದೇವಂ ಮತ್ವಾಧಿರೋ
ಹರ್ಷಶೋಕ ಜಹಾತಿ ॥ ಕ ಉ ೧. ೨. ೧೨

[ ಆ ದುರ್ದರ್ಶನೂ ಗೂಢವನ್ನು ಪ್ರವೇಶಿಸಿರುವವನೂ ಗುಹೆಯಲ್ಲಿರುವವನೂ ಪುರಾಣನೂ ಆದ ದೇವರನ್ನು ಅಧ್ಯಾತ್ಮಯೋಗ ಪ್ರಾಪ್ತಿಯಿಂದ ತಿಳಿದು ಕೊಂಡು ಧೀರನು ಹರ್ಷ ಶೋಕಗಳನ್ನು ಬಿಡುತ್ತಾನೆ.]

ಈ ಮಂತ್ರದಲ್ಲಿ ಯೋಗದ ಹೆಸರು ಮತ್ತು ಅದರ ಗುರಿಗಳೆರಡನ್ನೂ ತಿಳಿಸಿದ್ದು ಕಂಡುಬರುತ್ತದೆ. ಒಂದು ಇದು ಅಧ್ಯಾತ್ಮಯೋಗವೆಂದು ಕರೆಯಲ್ಪಟ್ಟಿದುಂಟು. ಇನ್ನೊಂದು ಇದು ದುರ್ದರ್ಶನನೂ ಗೂಢವನ್ನು ಪ್ರವೇಶಿಸಿರುವವನೂ, ಗುಹಾನಿವಾಸಿ ಅಂದರೆ ಹೃದಯ ಗುಹೆಯಲ್ಲಿರುವವನೂ ಮತ್ತು ಪುರಾಣನು ಅಂದರೆ ಇವನೇ ಪ್ರಮಥನು ಮತ್ತು ಪ್ರಥಮನು ಎಂದು ದೇವರನ್ನು ಲಕ್ಷಣಿಸಿ ಆತನ ದರ್ಶನವನ್ನು ಅಧ್ಯಾತ್ಮ ಯೋಗವು ಮಾಡಿಸುವದನ್ನು ಉಲೇಖಿಸಿರುವ ಕಠೋಪನಿಷತ್ತು ಯೋಗದ ವ್ಯಾಖ್ಯೆಯನ್ನೂ ಕೊಟ್ಟಿರುತ್ತದೆ.

ತಾಂ ಯೋಗಮಿತಿ ಮನ್ಯಂತೇ ಸ್ಥಿರಮಿಂದ್ರಿಯ ಧಾರಣಮ್।
ಅಪ್ರಮತ್ತಸ್ತದಾ ಭವತಿ ಯೋಗೋ ಹಿ ಪ್ರಭವಾಪ್ಯಯೌ॥ ಕ.ಉ.೨.೬.೧೧

೪೪. ಈ ಪ್ರಬಂಧದಲ್ಲಿ ಬಳಸಲಾದ ಉಪನಿಷತ್ತುಗಳೆಲ್ಲ ಕರ್ನಾಟಕದಲ್ಲಿರುವ ರಾಮಕೃಷ್ಣಾಶ್ರಮದವರ ಪ್ರಕಟಣೆಗಳಾಗಿವೆ. ಅಲ್ಲಲ್ಲಿ ಮ್ಯಾಕ್ಸಮುಲ್ಲರರ ಭಾಷಾಂತರಗಳನ್ನು ಬಳಸಲಾಗಿದೆ.

[ಸ್ಥಿರವಾದ ಇಂದ್ರಿಯ ಧಾರಣೆ ಎಂಬ ಈ ಅವಸ್ಥೆಯನ್ನೇ ಯೋಗವೆಂದು ತಿಳಿಯು ತ್ತಾರೆ. ಆಗ ಪ್ರಮಾದವಿಲ್ಲದವನಾಗಿ ಇರುತ್ತಾನೆ. ಏಕೆಂದರೆ ಉತ್ಪತ್ತಿ ನಾಶಗ ಳುಂಟು.] ಈ ಮಂತ್ರದಲ್ಲಿ ಉಲ್ಲೇಖವಾದ ಸ್ಥಿರವಾದ ಇಂದ್ರಿಯಧಾರಣೆ ಎಂಬುದು ಯೋಗ ವಿಜ್ಞಾನದ ಪ್ರಾಯೋಗಿಕ ವಿಚಾರಗಳಲ್ಲಿ ಬಹು ಮುಖ್ಯವಾದ ಕ್ರಿಯೆ ಆಗಿರು ತ್ತದೆ. ಈ ಮಾತನ್ನು ಉಪನಿಷತ್ಕಾಲಾನಂತರದ ಯೋಗದ ಆಕರ ಸಾಹಿತ್ಯದಲ್ಲಿ ನೋಡಿ ತಿಳಿದು ಕೊಳ್ಳಬೇಕಾಗಿಲ್ಲ. ಉಪನಿಷತ್ತು ಅದಕ್ಕೆ ಅವಕಾಶವನ್ನೂ ಕೊಟ್ಟಿಲ್ಲ. ಆದ್ದರಿಂದ ಕಠೋಪನಿಷತ್ತು ಏನನ್ನು ತಿಳಿಸುತ್ತದೆ ನೋಡೋಣ.

ಯದಾ ಪಂಚಾವತಿಷ್ಠಂತೇ ಜಾನಾನಿ ಮನಸಾ ಸಹ।
ಬುದ್ಧಿಶ್ಚ ನ ವಿಚೇಷ್ಟತೇ ತಾಮಾಹುಃ ಪರಮಾಂ ಗತಿಮ್॥ ಕ.ಉ.೨.೬.೧೧

[ಯಾವಾಗ ಪಂಚ ಜಾನೇಂದ್ರಿಯಗಳು ಮನಸಿನೊಂದಿಗೆ ಶಾಂತವಾಗುವವೋ ಬುದ್ಧಿ ಯು ಅಲ್ಲಾಡುವದಿಲ್ಲವೋ ಅದನ್ನು ಪರಮ ಗತಿಯೆಂದು ಹೇಳುತ್ತಾರೆ.] ಈ ಯೋಗ ತಂತ್ರ ವಿಜ್ಞಾನದ ಪ್ರಕಾರ ಮನ ಮತ್ತು ಬುದ್ಧಿಗಳ ಪಾತ್ರವು ಹಿರಿದಾದುದೆಂದು ತೋರುತ್ತದೆ. ಜಾನೇಂದ್ರಿಯಗಳು ಮನಸ್ಸಿನೊಂದಿಗೆ ಶಾಂತವಾಗಬೇಕು. ಬುದ್ಧಿಯ ಕಾರ್ಯ ನಿಂತುಹೋಗಬೇಕು. ಹೀಗೆ ಉಂಟಾದ ಸ್ಥಿತಿಯು ಪರಮ ಸಾಧನ ಸ್ಥಿತಿಯು. ಇದೇ ಪ್ರಮಾದವಿಲ್ಲದ ಸ್ಥಿತಿಯೆಂದು ಹೇಳಿರುವದು. ಬಹಿರ್ಮುಖವಾದ ಇಂದ್ರಿಯ ಮನ ಹಾಗೂ ಬುದ್ಧಿಗಳನ್ನು ಅಂತರ್ಮುಖಿಗೊಳಿಸುವುದು ಇಲ್ಲಿಯ ಕಾರ್ಯವಾಗಿರು ತ್ತದೆ. ಹೀಗೆ ಅಂತರ್ಮುಖಿಯಾಗಿ ಕಂಡುದನ್ನು ಬಹಿರ್ಮುಖಿಯಾಗಿ ನೋಡಿದಾಗ ಅಂತ ರಂಗ ಬಹಿರಂಗ ಭೇದವು ಹೋಗಿ ಒಳಹೊರಗೆಂಬುದೆಲ್ಲ ಒಂದೆ ಸತ್ಯವೆಂದರಿಯುವದೇ ಸತ್ಯ ದರ್ಶನ. ಈ ಮಾತನ್ನು ಹೀಗೆ ಹೇಳುತ್ತದೆ. 'by the words, "He is", is he to be apprehended, and by (admitting) the reality of both (the invisible Brahman and the visible world, as coming from Brahman). When he has been apprehended by the word "He is" then his reality reveals itself'[೫೫] ನಾಡಿಯ ವಿಚಾರವನ್ನು ಕೂಡ ಈ ಉಪನಿಷತ್ತು ಮಾಡಿದ್ದು, ಯೋಗ ತಂತ್ರದ ಶರೀರ ವಿಜ್ಞಾನ ವಿಚಾರದ ಅರಿವು ಆ ಪ್ರಾಚೀನರಿಗೆ ಇತ್ತೆಂಬುದನ್ನು ಖಚಿತ ಪಡಿಸುತ್ತದೆ.

ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಃ
ಸೃತೈಕಾ ।

---

೫೫. Max Muller (Tr) The Upanisads pt II, 2. 6. 13. Dover publication (1962).

ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙನ್ಯಾ
ಉತ್ಕ್ರಮಣೇ ಭವಂತಿ ॥ ಕ. ಉ. ೨. ೬. ೧೬.

[ ಹೃದಯಕ್ಕೆ ನೂರೊಂದು ನಾಡಿಗಳಿವೆ. ಅವುಗಳಲ್ಲಿ ಒಂದು ನೆತ್ತಿಯನ್ನು ಭೇದಿಸಿಕೊಂಡು ಹೊರಟಿರುವುದು. ಅದರ ಮೂಲಕ ಮೇಲಕ್ಕೆ ಹೋದವನು ಅಮೃತತ್ತ್ವವನ್ನು ಪಡೆಯುತ್ತಾನೆ. ಎಲ್ಲ ಕಡೆಯಲ್ಲಿಯೂ ಹರಡಿರುವ ಇತರ ನಾಡಿಗಳು ಸಂಸಾರಕ್ಕೆ ಕಾರಣವಾಗುತ್ತವೆ. ] ೨-೬-೧೭ ನೆಯ ಮಂತ್ರದಲ್ಲಿ ಹೃದಯ ಗುಹಾವಾಸಿಯಾದ ಪುರುಷನು ಅಂಗುಷ್ಠಮಾತ್ರನಿರುವನು. ಅವನೊಡನೆ ಒಂದಾಗುವದೇ ಯೋಗವೆಂದು ತಿಳಿಸುವುದು. ಪತಂಜಲಿಯಲ್ಲಿಯಂತೆ ವಿಯೋಗವಾಗದೆ ಸಾಮರಸ್ಯ ಅಥವ ಐಕ್ಯವಾಗುವದಾಗಿದೆ ಈ ಯೋಗದ ವಿಚಾರ.

**ಪ್ರಾಚೀನ ಯೋಗ :**

ಇಲ್ಲಿಯವರೆಗೆ ಕಠೋಪನಿಷತ್ತು ಪ್ರತಿಪಾದಿಸಿದ ಆಧ್ಯಾತ್ಮಯೋಗವನ್ನು ಅರಿತುಕೊಂಡುದಾಯಿತು. ಈಗ ತೈತ್ತಿರೀಯಿ ಉಪನಿಷತ್ತು ಕೂಡ ಯೋಗದ ಪ್ರಸ್ತಾಪವನ್ನು ಮಾಡುತ್ತದೆ. ಅದನ್ನು 'ಪ್ರಾಚೀನಯೋಗ'ವೆಂದು ಹೆರರಿಸಿದೆ. ಆ ಬಗ್ಗೆ ಈಗ ತೈತ್ತಿರೀಯ ಉಪನಿಷತ್ತು ಏನು ಹೇಳುತ್ತದೆ ಎಂಬುದನ್ನು ನೋಡುವಾ.

ಸ ಯ ಎಷೋಽಂತರ್ಹೃದಯ ಆಕಾಶ ಃ । ತಸ್ಮಿನ್ನಯಂ
ಪುರುಷೋ ಮನೋಮಯ ಃ ।
ಅಮೃತೋ ಹಿರಣ್ಮಯ ಃ । ಅಂತರೇಣ ತಾಲುಕೇ । ಯ
ಏಷ ಸ್ತನ ಇವಾವಲಂಬತೇ ।
ಸೇಂದ್ರ ಯೋನಿಃ । ಯತ್ರಾಸೌ ಕೇಶಾಂತೋ ವಿವರ್ತತೇ ।
ವ್ಯಪೋಹ್ಯ ಶೀರ್ಷಕಪಾಲೇ ।
ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ ।
ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ ।
ಆಪ್ನೋತಿ ಸ್ವಾರಾಜ್ಯಮ್ । ಆಪ್ನೋತಿ ಮನಸಸ್ಪತಿಮ ।
ವಾಕ್ಪತಿ ಶ್ಚಕ್ಷುಷ್ಪತಿ ಃ ।
ಶ್ರೋತ್ರಪತಿರ್ವಿಜ್ಞಾನ ಪತಿ ಃ । ಏತತ್ತತೋ ಭವತಿ।ಆಕಾಶಶರೀರಂಬ್ರಹ್ಮ
ಸತ್ಯಾತ್ಮ ಪ್ರಾಣಾರಾಮಂ ಮನ ಆನಂದಮ್। ಶಾಂತಿಸಮೃದ್ಧ ಮಮೃತಮ್ ।
ಇತಿ ಪ್ರಾಚೀನಯೋಗೋಪಾಸ್ವ ॥ ಇತಿಷಷ್ಠೋಽನುವಾಕ ಃ ॥
ತೈ. ಉ. ಶಿಕ್ಷಾವಲ್ಲಿ ಆರನೇ ಅನುವಾಕ.

[Lo, this heaven of eather which is in the heart within, dwells the Being who is all Mind, the radiant and golden Immortal. Between the two palates, this that hangs down like the breast of a woman, is the womb of Indra; yea where the hair at its end whirls round like an eddy, there it divides the skull and pushes through it. As Bhur He is established in Agni, as Bhuvar in Vayu, as Suvar in the Sun, as Mahas in the Eternal. He attains to the kingdom of Himself, he attains to the Lord of Mind; He becomes Lord of speech, Lord of Sight, Lord Hearing, Lord of the Knowledge, There after this too he becomes, the Eternal whose body is all ethereal space, whose soul is truth, whose bliss is in Mind, who takes His ease in Prana, the rich in Peace, the Immortal. As such, and son of ancient yoga, do thou adore Him.][೪೬]
ಇದು ಶಿಕ್ಷಾವಲ್ಲಿಯ ೬ ನೇ ಅನುವಾಕದಲ್ಲಿ ಬರುತ್ತದೆ. ಇದೇ ವಲ್ಲಿಯ ೩, ೮, ಮತ್ತು ೫ ನೇ ಅನುವಾಕುಗಳಲ್ಲಿ ಯೋಗದಲ್ಲಿಯ ಆದಿ ಹೃದಯ, ಮಧ್ಯ ಹೃದಯ ಹಾಗೂ ಊರ್ಧ್ವಹೃದಯ ಹಾಗೂ ಹೃದಯೋತ್ತರಗಳು ವಿರಾಟಪುರುಷನಲ್ಲಿಯವುಗಳಾಗಿವೆ ಎಂದು ಕಂಡು ಬರುತ್ತವೆ. ಪೃಥವೀತತ್ತ್ವ ಆದಿಹೃದಯದ ತತ್ತ್ವ,ವಾಯು ತತ್ತ್ವವು ಮಧ್ಯಹೃದಯದ ತತ್ತ್ವವು, ಆಕಾಶ ತತ್ತ್ವವು ಊರ್ಧ್ವಹೃದಯದ ತತ್ತ್ವವು, ಓಂಕಾರವೆಂಬುದು ಆಧಾರತ್ರಯದಾಚೆಯಿರವ ತತ್ತ್ವವು. ಈ ಮೂರು ಕ್ಷೇತ್ರಗಳಿಲ್ಲಿ ತತ್ತ್ವಗಳನ್ನು, ಮತ್ತು ಉಪಾಸನೆಗಳನ್ನು ಆಯಾ ತತ್ತ್ವಗಳ ದರ್ಶನ ಅಥವ ಉಪನಿಷತ್‌ಗಳನ್ನು ಹಾಗೂ ಈ ಎಲ್ಲ ತತ್ತ್ವಗಳಿಗೆಲ್ಲ ಮುಖ್ಯವಾದ 'ಓಂ' ಕಾರ ಉಪಾಸನೆಯುನ್ನು ಹೇಳಿ, ಕೊನೆಗೆ, ಅಂದರೆ ೬ ನೆಯ ವಲ್ಲಿಯಲ್ಲಿ, ಪ್ರಾಚೀನ ಯೋಗದ ವಿಚಾರ ಪ್ರಸ್ತಾಪನೆಯುನ್ನು ಮಾಡಲಾಗಿರುತ್ತದೆ. ಇದು ಒಂದು ಕ್ರಮವನ್ನನುಸರಿಸಿಯೇ ಬಂದಿದೆಯೆಂದು ಈ ಅನುವಾಕಗಳ ಅಧ್ಯಯನದಿಂದ ಗೋತ್ತಾಗುತ್ತದೆ. ಈ ಮೂರು ಹೃದಯಸ್ಥಾನಗಳಲ್ಲಿ ಮಧ್ಯಹೃದಯದ ಅಂದರೆ ದಹರಾಕಾಶದ ವಿಚಾರವು ಇಲ್ಲಿಯ ಪ್ರಾಚೀನಯೋಗದ ಆಧಾರವಾಗಿದೆ. ಇಲ್ಲಿ ಪಡೆದ ಅಂಗುಷ್ಠಮಾತ್ರನಾದ ಜ್ಯೋತಿಪುರುಷನ ನಂತರ ಸತ್ಯನೂ ಪ್ರಜ್ಞಾನನೂ ಆನಂದಮ

೪೬. Shri Aurobindo, Eight Upanisads, p. 137, Shri Aurobindo Ashram, Pondicherry, (1965).

ಯನೂ ಅನಂತನೂ ಆದ ವಿಶ್ವೋತ್ತೀರ್ಣ ಪರಬ್ರಹ್ಮ ಸಾಕ್ಷಾತ್ಕಾರಕಾಗಿ ಮಾರ್ಗದರ್ಶನವೇ ಪ್ರಾಚೀನಯೋಗದ ತಂತ್ರಜ್ಞಾನವು. ಇಲ್ಲಿಂದ ಹೊರಟ ಸುಷುಮ್ನಾನಾಡಿಯು ಊರ್ಧ್ವಗಾಮಿಯಾಗಿ ಶೀರ್ಷಕಪಾಲ ಭೇದಿಸಿಕೊಂಡು ಬ್ರಹ್ಮರಂಧ್ರ ಮೂಲಕ ಚಿದ್ಬಯಲ ಪ್ರವೇಶಿಸಿ ಆ ಚಿದ್ಬಯಲ ಬ್ರಹ್ಮವು ತಾನೇ ತಾನಾಗಿ ಬಿಡುವನು. ಈ ಪ್ರಾಚೀನಯೋಗ ಪರಂಪರಾ ಸಂಜಾತನಿಗೆ ಇಲ್ಲಿಯ ಅನುಭವನ್ನು ಹೇಳುವ ಮೂಲಕ ಅದರ ಪರಿಚಯೋಪದೇಶವಾಗಿದೆ.

೩. ಅಸ್ಪರ್ಶಯೋಗ

ಮಾಂಡೂಕ್ಯೋಪನಿಷತ್ತಿನ ಕಾರಿಕೆಯಲ್ಲಿ ಅಸ್ಪರ್ಶಯೋಗವೆಂಬ ಪದಪ್ರಯೋಗವನ್ನು ನೋಡುತ್ತೇವೆ. ಗೌಡಪಾದರು ತಿಳಿಸುವ ಮುಖ್ಯವಾದ ಸಾಧನಗಳಲ್ಲಿ ಇದು ಒಂದು ಎಂದು ಸ್ವಾಮೀ ಆದಿದೇವಾನಂದರು ಪೀಠಿಕೆಯ ಕೊನೆಕೊನೆಗೆ ಗುರುತಿಸಿ ಬರೆದಿದ್ದಾರೆ. ಇದು ಉಪನಿಷತ್ತುಗಳಲ್ಲಿ ಪ್ರಸಿದ್ಧವಾಗಿದೆ ಎಂದು ತಿಳಿಸುತ್ತಾರೆ. ಈ ಮಾತಿನಿಂದ ಯೋಗ ವಿಧಾನವು ಅಥವಾ ಸಾಧನವು ಉಪನಿಷತ್ತುಗಳೆಲ್ಲರಲ್ಲಿರುವ ಸಾಧನವೆಂದಂತಾಯಿತೆಂದು ಸ್ಪಷ್ಟವಾಗುತ್ತದೆ. ಇದು ಯೋಗದ ಉಪನಿಷನ್ಮಯತೆಗೆ ಸಾಕ್ಷಿ.

ಈ ಯೋಗ ವೈಶಿಷ್ಟವು ಶಬ್ದ ಅಥವ ನಾಮದಲ್ಲಿದೆ. ಆಧ್ಯಾತ್ಮ ಯೋಗ, ಧ್ಯಾನ ಯೋಗ, ಪ್ರಾಚೀನಯೋಗಗಳು ಹೇಳುವ ಸಿದ್ಧಿಯನ್ನೇ ಇದು ಕೂಡ ಹೇಳುವದಾದ್ದರಿಂದ ಸಿದ್ಧಿಯಲ್ಲಿ ಭಿನ್ನತೆಯಿರದೆ ಸಾಧನದ ವಿವರಣೆಯಲ್ಲಿ ಭೇದವಿದ್ಧಂತೆ ಭಾಸವಾಗುತ್ತದೆ. ಸರ್ವವ್ಯಾಪಿ ಸರ್ವಜ್ಞ ಸರ್ವಶಕ್ತ ಸರ್ವಾತ್ಮವಾಗಿರುವ ವಸ್ತುವನ್ನು ಮನುಷ್ಯನು ವ್ಯಷ್ಟಿಯಾಗಿ ಅಂತರಂಗದಲ್ಲಿ ಅರಿತುಕೊಳ್ಳಬಹುದು, ಸಮಷ್ಟಿಯಾಗಿ ಬಹಿರಂಗದಲ್ಲಿಯೂ ಅರಿತುಕೊಳ್ಳಬಹುದು ತಾನೆ ಎಂದು. ಇದು ಸಹಜಯೋಗವಾಗಿರುತ್ತದೆ ಶಿವಶರಣರು ಹೇಳುವಂತೆ. ಅದೇ ತಾನಾಗುವುದು ಯೋಗವಾಗಿದೆ, ಅದರಂತೆ ತಾನೇ ತಾನಾಗುವದೂ ಯೊಗವೆ. ಒಂದು ವಿಧವಿಧವಾದ ಕರ್ಮಗಳನ್ನು ಅನುಷ್ಠಾನ ಮಾಡಿ ದೈಹಿಕ ನೈತಿಕ ಸಿದ್ಧತೆಯಲ್ಲಿ ತೊಡಗಿ ದೇಹದಲ್ಲಿ ಹದುಗಿರುವ ವಿವಿಧ ಶಕ್ತಿಗಳ ವಿಮೋಚನೆ ಗೊಳಿಸುವ ಮೂಲಕ ಆ ಶಕ್ತಿಗಳ ಮೂಲವನ್ನು ಗುರುತಿಸಿಕೊಂಡು ಆ ಸಹಜ ದೊಡನೆ ತಾನು ಸಹಜವಾಗುವುದು ಯೋಗದ ಒಂದು ವಿಧ. ದೈಹಿಕ ನೈತಿಕ ಸಿದ್ಧತೆ ಮಾಡಿಕೊಂಡು ನೀತಿ ಮಾರ್ಗದಿಂದ ತಾನು ಕೇವಲವಾಗಿರುವ ಭೇಧವೇ ಯೋಗ. ಇದು ಎರಡನೆಯ ವಿಧ. ಇದು ಅಸ್ಪರ್ಶಯೋಗ, ಈ ಎರಡೂ ಬಗೆಯ ಯೋಗಗಳಲ್ಲಿ ಸಾಧನದ ರೀತಿಗಳು ಭಿನ್ನ ಭಿನ್ನವಾಗಿವೆ. ಮೊದಲನೆಯದನ್ನು ಸ್ಪರ್ಶಯೋಗವೆಂದು ಹೆಸರಿಸಬೇಕಾಗುವದು. ಇದು ಶೇಶ್ವರ ಯೋಗ. ಎರಡನೆಯದು ಅಂದರೆ ಅಸ್ಪರ್ಶಯೋಗವು ಬ್ರಹ್ಮಯೋಗ, ಮೊದಲನ್ನೆಯದರಲ್ಲಿ

ಈಶ್ವರ ಪರಬ್ರಹ್ಮ ಬೇರೆ ಬೇರೆ ಅಲ್ಲ. ಎರಡನೆಯದರಲ್ಲಿ ಈಶ್ವರನು ಪರಬ್ರಹ್ಮದ ವಿಕೃತಿ; ಒಂದು ತೋರಿಕೆ. ಈ ತತ್ತ್ವಜ್ಞಾನಕ್ಕನುಸರಿಸಿ ಅಸ್ಪರ್ಶಯೋಗವನ್ನು ಗೌಡಪಾದಾಚಾರ್ಯರು ಪ್ರತಿಪಾದಿಸಿದ್ದಾರೆ.

ಈ ಯೋಗವನ್ನು ಅಂದರೆ ಅಸ್ಪರ್ಶಯೋಗವನ್ನು ಕುರಿತು ಸ್ವಾಮೀ ಆದಿದೇವಾನಂದರು ಕೊಟ್ಟ ವಿವರಣೆ ಇಂತಿದೆ[೪೭] [ಸಾಮಾನ್ಯವಾಗಿ ಯೋಗಶಬ್ದಕ್ಕೆ 'ಸೇರಿಕೆ' ಎಂಬ ಅರ್ಥವಿದ್ದರೂ ಈ ಯೋಗದಲ್ಲಿ ಯಾವ ವಸ್ತುವಿನೊಂದಿಗೂ ಸ್ಪರ್ಶವು ಅಥವ ಸಂಯೋಗವು ಇರುವದಿಲ್ಲ. ಇಂದ್ರಿಯಗಳಿಗೂ ವಿಷಯಗಳಿಗೂ ಆಗುವ ಸ್ಪರ್ಶಗಳನ್ನೇ ಗೀತೆಯಲ್ಲಿ [೨.೧೪] ಮಾತ್ರಾಸ್ಪರ್ಶಾಃ ಎಂದು ಹೇಳಿದೆ. ಸ್ಪರ್ಶವಿಲ್ಲದುದು ಅಸ್ಪರ್ಶ ಎಂದರೆ ಪರಮಾರ್ಥ ತತ್ತ್ವ. ದುಃಖ ಸಂಬಂಧವನ್ನು ದೂರ ಮಾಡುವದಕ್ಕೆ ಯೋಗವೆಂದು ಹೆಸರು [ಗೀತಾ. ೬.೨೩]. ಪರಮಾರ್ಥ ವಸ್ತುವನ್ನು ಅರಿತುಕೊಳ್ಳಲು ಸಾಧನವಾಗಿರುವುದು ಅಸ್ಪರ್ಶಯೋಗ. 'ಯಾವ ಸಂಬಂಧ ರೂಪವಾದ ಸ್ಪರ್ಶವೂ ಇದಕ್ಕೆ ಇಲ್ಲದಿರುವುದರಿಂದ ಅಸ್ಪರ್ಶಯೋಗವೆಂದೆನಿಸಿದೆ.' ಸರ್ವ ಸಂಬಂಧಾಖ್ಯ-ಸ್ಪರ್ಶ-ವರ್ಜಿತತ್ವಾತ್ ಅಸ್ಪರ್ಶಯೋಗಃ ಗೌ.ಕಾ. ೩.೩೯ರ ಮೇಲೆ ಶಾಂಕರ ಭಾಷ್ಯ].

### ೪. ಧ್ಯಾನಯೋಗ :

ಹಲವು ಉಪನಿಷತ್ತುಗಳು ಪರಬ್ರಹ್ಮ ಸಾಕ್ಷಾತ್ಕಾರಕ್ಕಾಗಿರುವ ಸಾಧನಗಳಲ್ಲಿ ಒಂದಾದ ಧ್ಯಾನವನ್ನು ಸೂಚಿಸುತ್ತವೆ. ಶ್ವೇತಾಶ್ವತರೋಪನಿಷತ್ತು ಧ್ಯಾನ ರೂಪದ ಸಾಧನವನ್ನು 'ಧ್ಯಾನಯೋಗ' ಎಂದು ಹೆಸರಿಸಿದೆ. ಧ್ಯಾನಯೋಗವೆಂದು ಕೇವಲ ಹೆಸರಿಸಿ ಕೈಬಿಡದೆ ಅದರ ತಂತ್ರ, ಸಾಧನದ ರೀತಿ, ಮತ್ತು ಸಾಧನದ ಗುರಿಯನ್ನು ತಿಳಿಸಿದೆ. ಮೊದಲನೆಯ ಅಧ್ಯಾಯದ ಮೂರನೆ ಮಂತ್ರದಲ್ಲಿ ಈ ಸಾಧನದ ನಾಮ ನಿರ್ದೇಶನವಿರುತ್ತದೆ.

> ತೇ ಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ
> ಸ್ವಗುಣೈರ್ನಿಗೂಢಮ್ ।
> ಯಃ ಕಾರಣಾನಿ ನಿಖಿಲಾನಿ ತಾನಿ ಕಾಲಾತ್ಮಯುಕ್ತಾ
> ನ್ಯಧಿತಿಷ್ಠತ್ಯೇಕಃ॥ ಶ್ವೇ. ಉ. ೧.೩.

[ಧ್ಯಾನಯೋಗದಲ್ಲಿ ಸಮಾಹಿತರಾದ ಆ ಋಷಿಗಳು ತನ್ನ ಗುಣಗಳಿಂದ ಮುಚ್ಚಲ್ಪಟ್ಟ ದೇವನ ಆತ್ಮ ಶಕ್ತಿಯನ್ನು ಸಾಕ್ಷಾತ್ಕರಿಸಿದರು. ಅದ್ವಿತೀಯನಾದ ಆ ಪರಮಾತ್ಮನು

---

೪೭ ಸ್ವಾಮೀ ಆದಿದೇವಾನಂದ ಮಾಂಡೂಕ್ಯೋಪನಿಷತ್ ಮತ್ತು ಗೌಡಪಾದ ಕಾರಿಕಾ. ಪೀಠಿಕೆ ಪು. ೨೫. ರಾಮಕೃಷ್ಣಾಶ್ರಮ ಮೈಸೂರು (೧೯೫೮).

ಕಾಲದಿಂದ ಆತ್ಮನ ವರೆಗಿರುವ ಕಾರಣಗಳನ್ನೆಲ್ಲ ನಿಯಮಿಸುತ್ತಾನೆ. ] ಹೀಗೆ ಅನ್ಯ ಪಕ್ಷಗಳನ್ನೆಲ್ಲ ನಿರಾಕರಿಸಿ, ಬೇರೆ ಪ್ರಮಾಣಗಳಿಗೆ ಅಗೋಚರವಾದ ವಸ್ತುವಿನ ವಿಷಯ ದಲ್ಲಿ ಮತ್ತಾವ ಉಪಾಯವನ್ನು ನೋಡದೆ ಧ್ಯಾನಯೋಗದ ಮೂಲಕ ಪರಮ ಮೂಲಕಾರಣವನ್ನು ಋಷಿಗಳು ತಾವೇ ಪಡೆದುಕೊಂಡರು ಎಂಬುದಿಲ್ಲಿ ಹೇಳ ಲಾಗಿದೆ. ಈ ಮಂತ್ರದಲ್ಲಿ ದೇವನ ಆತ್ಮಶಕ್ತಿಯ ಸಾಕ್ಷಾತ್ಕಾರವಾಗಿರುವದರ ಉಲ್ಲೇಖವಿರುತ್ತದೆ. ಧ್ಯಾನಯೋಗದ ಪ್ರಕಾರ ಪರಬ್ರಹ್ಮದ ನಾನಾ ಸ್ವರೂಪಗಳ ಧ್ಯಾನವನ್ನು ಮಾಡಲು ಸೂಚಿಸಿದ್ದುಂಟು. ಅದರಲ್ಲಿ 'ಓಂ' ಕಾರಧ್ಯಾನವೇ ಸರ್ವೋತ್ತ ಮವೆಂದು ಕಂಡು ಬರುತ್ತದೆ. ಚಿತ್ತದ ಏಕಾಗ್ರತೆಯೇ ಧ್ಯಾನವೆಂದು ಟಿಪ್ಪಣಿಯಲ್ಲಿ ತಿಳಿಸಲಾಗಿದೆ.

ಧ್ಯಾನಯೋಗಿಗೆ ದೇವರ ಅನುಗ್ರಹವು ಬಹಳ ಅವಶ್ಯವಿರುವದೆಂಬ ಮಾತನ್ನು ಉಪನಿಷತ್ತು ತಿಳಿಸಿದ್ದು ಗಮನಾರ್ಹ ಸಂಗತಿಯಾಗಿದೆ. ದೇವರ ಅನುಗ್ರಹದ ಅವಶ್ಯ ಕತೆಯನ್ನು ಕುರಿತು ಬೇರೆ ಉಪನಿಷತ್ತುಗಳೂ ಪ್ರಸ್ತಾಪಿಸುತ್ತವೆ. ದೇವತಾ ಪ್ರತ್ಯಕ್ಷಕ್ಕೆ ಪುರುಷ ಪ್ರಯತ್ನದೊಡನೆ ದೇವರ ಅನುಗ್ರಹವು ಶೀಘ್ರ ಫಲ ಕೊಡುವುದು ಎಂಬುದರ ಸೂಚನೆಯು ಇಲ್ಲಿ ಇರುತ್ತದೆ.

....ಜುಷ್ಟಸ್ತತಸ್ತೇನಾಮತತ್ವಮೇತಿ ॥ ಶ್ವೇ. ಉ. ೧. ೬. [ಯಾವಾಗ ಅವನು ಈಶ್ವರನಿಂದ ಅನುಗ್ರಹಿಸಲ್ಪಡುವನೋ ಆಗ ಅಮೃತತ್ವವನ್ನು ಹೊಂದು ತ್ತಾನೆ.] ಅನುಗ್ರಹವು ಯೋಗಿಸಿದ್ಧಿಯ ಅವಶ್ಯಕತೆಗಳಲ್ಲಿ ಒಂದು. ಅದು ಧ್ಯಾನ ಯೋಗದ ಅಂಗವಾಗಿದೆ. ಧ್ಯಾನಯೋಗಿಯು ಪರಬ್ರಹ್ಮ ತತ್ವವನ್ನು ಅರಿಯಬೇಕು. ಅದರ ಕಾರ್ಯಗಳನ್ನು ಜೀವ ಹಾಗೂ ಜಗತ್ತಿನ ಲಕ್ಷಣ ಮತ್ತು ಕಾರ್ಯಗಳನ್ನು ತಿಳಿದು ಕೊಂಡು ಪರಶಿವವನ್ನು ಧ್ಯಾನಿಸಬೇಕು. ಆಗ ಸಂಸಾರವು ಅಂದರೆ ಜನನ ಮರಣವೆಂಬ ಭವಚಕ್ರವು, ಧ್ಯಾನಯೋಗಿಗೆ ನಿಂತು ಹೋಗುತ್ತದೆ ಎಂಬುದನ್ನು ಉಪನಿಷತ್ತು ತಿಳಿಸುತ್ತದೆ. ಈ ಧ್ಯಾನ ಯೋಗದಲ್ಲಿ ತಾನು ಮತ್ತು ಪರಶಿವನ ಪ್ರತೀಕವಾದ ಮಂತ್ರ ಅಥವಾ ಪ್ರಣವವೆಂಬ ಲಿಂಗವು ಕೂಡಿ ಅಂದರೆ ಆ ಪ್ರಣವವನ್ನು ಇದಿರಿಟ್ಟು ಕೊಂಡು ಸದಾ ಧ್ಯಾನಿಸುವದರಿಂದ ಪರಶಿವನು ಪ್ರತ್ಯಕ್ಷನಾಗುವನು. ಅಂದರೆ ಆತನ ಜ್ಞಾನವು ಆಗುತ್ತದೆ. ಈ ಧ್ಯಾನದ ಇನ್ನೊಂದು ಪರಿಣಾಮವೆಂದರೆ–

ತಸ್ಯಾಭಿಧ್ಯಾನಾತ್ ತೃತೀಯಂ ದೇಹಭೇದೇ ವಿಶ್ವೈಶ್ವರ್ಯಂ ಕೇವಲ ಆಪ್ತ ಕಾಮಃ॥ ಶ್ವೇ. ಉ. ೧. ೧೧.

[ಅವನ ಅಭಿಧ್ಯಾನದಿಂದ ಸರ್ವೈಶ್ವರ್ಯ ಲಕ್ಷಣವುಳ್ಳ ಮೂರನೆಯ (ಅವಸ್ಥೆಯನ್ನು) ಶರೀರ ಪಾತವಾದ ಮೇಲೆ (ಹೊಂದುತ್ತಾನೆ). (ಅನಂತರ) ಕೇವಲನೂ ಆಪ್ತಕಾ

ಮನೂ (ಆಗುತ್ತಾನೆ.).] ಯೋಗದ ವಸ್ತು, ವಸ್ತುಲಕ್ಷಣ, ಧ್ಯಾನಯೋಗಿಯ ಸಿದ್ಧಿಗಳನ್ನು ಪರಿಚಯಿಸಿದ ಮೇಲೆ ಯೋಗದ ಉಳಿದ ತಂತ್ರದ ವಿಚಾರವನ್ನು ತಿಳಿಸುವದು ಇಂತಿದೆ-

ತ್ರಿರುನ್ನತಂ ಸ್ಥಾಪ್ಯ ಸಮಂ ಶರೀರಂ ಹೃದಿಂದ್ರಿಯಾಣಿ ಮನಸಾ ಸನ್ನಿವೇಶ್ಯ।
ಬ್ರಹ್ಮೋಡುಪೇನ ಪ್ರತರೇತ ವಿದ್ವಾನ್ ಸ್ರೋತಾಂಸಿ
ಸರ್ವಾಣಿ ಭಯಾವಹಾನಿ ॥ ಶ್ವೇ. ಉ. ೨. ೮.

[ವಿದ್ವಾಂಸನು (ತಲೆ, ಕೊರಳು, ಎದೆ ಎಂಬ) ಉನ್ನತವಾದ ಮೂರು ಅಂಗಗಳುಳ್ಳ ಶರೀರವನ್ನು ಸಮವಾಗಿ ನಿಲ್ಲಿಸಿ, ಮನಸ್ಸಿನಮೂಲಕ ಇಂದ್ರಿಯಗಳನ್ನು ಹೃದಯದಲ್ಲಿ ನಿಯಮಿಸಿ, ಭಯಾನಕವಾದ ಸಮಸ್ತ ಸಂಸಾರ ಪ್ರವಾಹಗಳನ್ನು ಬ್ರಹ್ಮವೆಂಬ ತೆಪ್ಪದ ಸಹಾಯದಿಂದ ದಾಟಬೇಕು. ] ಯೋಗ ಸಾಧನೆಯನ್ನು ಮಾಡಲು ಕುಳಿತ ಮನುಷ್ಯನು ಧ್ಯಾನ್ಯದ ಸೌಕರ್ಯಕ್ಕಾಗಿ ಉನ್ನತವಾದ ಮೂರು ಅಂಗಗಳನ್ನು ಅಂದರೆ ತಲೆ, ಕೊರಳು, ಮೇರುದಂಡ (ಶರೀರ ಅಥವ ಕಾಯ)ವನ್ನು ಸಮಸ್ಥಿತಿಯಲ್ಲಿರಿಸಬೇಕೆಂಬ ನಿಯಮ ಪರಿಪಾಲನೆಗಾಗಿ ತಿಳಿಸಲಾಗಿದೆ.
**ಸಮಂ ಕಾಯಶಿರೋಗ್ರೀವಂ** ಧಾರಯನ್ನಚಲಂ ಸ್ಥಿರಃ ಎಂಬುದನ್ನು ಗೀತೆ ಹೇಳಿದದನ್ನೂ ಈ ಮಂತ್ರವು ತಿಳಿಸುತ್ತದೆ. ಇದರ ನಂತರ ಉಪನಿಷತ್ತು ಇನ್ನೂ ಹಲವು ವಿಚಾರಗಳನ್ನು ತಿಳಿಸುವದು-

ಪ್ರಾಣಾನ್ ಪ್ರಪೀಡ್ಯೇಹ ಸಂಯುಕ್ತ ಚೇಷ್ಟಃ ಕ್ಷೀಣೇ
ಪ್ರಾಣೇ ನಾಸಿಕಯೋಚ್ಛ್ವಸೀತ ।
ದುಷ್ಟಾಶ್ವಯುಕ್ತಮಿವ ವಾಹಮೇನಂ ವಿದ್ವಾನ್ ಮನೋ
ಧಾರಯೇ ತಾಪತ್ರಮತ್ತಃ । ಶ್ವೇ. ಉ. ೨. ೯.

[ವಿದ್ವಾಂಸನು ಯೋಗಮಾರ್ಗದಲ್ಲಿ ಯುಕ್ತಾಹಾರವಿಹಾರನಾಗಿ, ಪ್ರಾಣಗಳನ್ನು ನಿರೋಧಿಸಿ, ಪ್ರಾಣಶಕ್ತಿಯು ಕ್ಷೀಣವಾದಾಗ ಪ್ರಾಣವಾಯುವನ್ನು ಮೂಗಿನಿಂದ ಹೊರಗೆ ಹಾಕಬೇಕು; ಕೆಟ್ಟ ಕುದುರೆಗಳನ್ನು ಕಟ್ಟಿದ ರಥವನ್ನು (ಸಾರಥಿಯು ಹೇಗೆ ನಿಗ್ರಹಿಸುವನೊ) ಹಾಗೆ ಜಾಗರೂಕನಾಗಿ (ತನ್ನ) ಮನಸ್ಸನ್ನು ನಿಗ್ರಹಿಸಬೇಕು- ] ಇದು ಪ್ರಾಣಾಯಾಮ, ಪ್ರತ್ಯಾಹಾರಾದಿಗಳನ್ನು ತಿಳಿಸುತ್ತದೆ. ಹೀಗೆ ಯೋಗ ತಂತ್ರದ ಕೆಲವು ವಿಚಾರಗಳು ಇಲ್ಲಿ ಉಕ್ತವಾಗಿವೆ.

ಆ ಮೇಲೆ ಯೋಗಸಾಧನವನ್ನು ಮಾಡಲು ಸ್ಥಳದ ಆಯ್ಕೆಯ ವಿಚಾರವನ್ನು ಕೂಡ ಈ ಉಪನಿಷತ್ತು ತಿಳಿಸುತ್ತದೆ.

ಸಮೇ ಶುಚೌ ಶರ್ಕರಾವಹ್ನಿ ವಾಲುಕಾ ವಿವರ್ಜಿತೇ ಶಬ್ದ ಜಲಾಶ್ರಯಾದಿಭಿಃ॥
ಮನೋಽನುಕೂಲೇ ನ ತು ಚಕ್ಷುಪೀಡನೇ ಗುಹಾನಿವಾತಾಶ್ರಯಣೇ
ಪ್ರಯೋಜಯೇತ್ । ಶ್ವೆ. ಉ ೨. ೧೦.

[ಹಳ್ಳ ತಿಟ್ಟುಗಳಿಲ್ಲದೆ ಸಮವಾದ, ಶುಚಿಯಾದ, ಸಣ್ಣಕಲ್ಲುಗಳು ಬೆಂಕಿ ಧೂಳು ಶಬ್ದ ನೀರು ಜನರ ವಾಸಸ್ಥಾನ–ಇವುಗಳಿಲ್ಲದ, ಮನಸ್ಸಿಗೆ ಅನುಕೂಲವಾದ, ಕಣ್ಣಿಗೆ ಪೀಡೆಯನ್ನುಂಟು ಮಾಡದ, ಗುಹೆಯೇ ಮೊದಲಾದ ವಾಯುಪ್ರವಾಹವಿಲ್ಲದ ಸ್ಥಾನದಲ್ಲಿ (ಕುಳಿತು ಮನಸ್ಸನ್ನು ಪರಮಾತ್ಮನಲ್ಲಿ) ನಿಯೋಜಿಸಬೇಕು.] ಈ ಮಂತ್ರದಲ್ಲಿ ಯೋಗ ಸಾಧನೆಗೆ ಬೇಕಾದ ಭೂಮಿಯ ಆಯ್ಕೆಗಾಗಿ ಮಾಡಿದ ಸೂಚನೆಗಳನ್ನು ನೋಡುತ್ತೇವೆ. ಪ್ರಶಾಂತತೆಯು ಧ್ಯಾನ ಮಾಡಲು ಬೇಕಾದ ಮನಸ್ಸಿಗಾಗಿ ಅವ್ಯಶವಾಗಿರುವ ಸೌಕರ್ಯ ವಾಗಿರುತ್ತದೆ. ಇಂದ್ರಿಯಗಳಿಗೆ ಪೀಡೆಯಾಗದಿರಬೇಕೆಂಬ ಎಚ್ಚರಿಕೆಯ ಮಾತು ಇಲ್ಲಿದೆ. ಪ್ರಾಣಾಯಾಮವು ನಿಶ್ಚಲವಾಗಿ ವಾಯುವು ಇದ್ದಲ್ಲಿ ನಡೆಯಬೇಕೆಂಬ ಸಲಹೆಯೂ ಇದೆ. ಇದು ಶುಚಿತ್ವದ ಮಹತ್ವವನ್ನು ತಿಳಿಸುವ ಮಂತ್ರವಾಗಿದೆ. ಈ ಶುಚಿತ್ವದ ಲಾಭ ಪಡೆದು ಧ್ಯಾನಾಸಕ್ತನಾದಾಗ ಒದಗುವ ಅನುಭವಗಳ ಬೇರೆ ಕೆಲವು ವಿಚಾರಗಳನ್ನು ಹೇಳಿದ್ದು-

ನೀಹಾರಧೂಮಾರ್ಕಾನಿಲಾನಲಾನಾಂ ಖದ್ಯೋತ ವಿದ್ಯುತ್
ಸ್ಫಟಿಕ ಶಶೀ ನಾಮ್।
ಏತಾನಿ ರೂಪಾಣಿ ಪುರಃ ಸರಾಣಿ ಬ್ರಹ್ಮಣ್ಯಭಿವ್ಯಕ್ತಿಕರಾಣಿ
ಯೋಗೇ। ಶ್ವೇ ಉ. ೨.. ೧೧

[ಪೃಥ್ವಿ ನೀರು ತೇಜಸ್ಸು ವಾಯು ಆಕಾಶ ಇವು ಅಭಿವ್ಯಕ್ತವಾದಾಗ, ಎಂದರೆ, ಪಂಚಭೂತಮಯವಾದ ಯೋಗ ಗುಣಗಳು ಪ್ರಕಟಿತವಾದಾಗ ಯೋಗಾಗ್ನಿಮಯವಾದ ಶರೀರವನ್ನು ಹೊಂದಿರುವ ಯೋಗಿಗೆ ರೋಗವಾಗಲಿ ಮುಪ್ಪಾಗಲಿ ಮೃತ್ಯುವಾಗಲಿ ಇರುವದಿಲ್ಲ.] ಈ ಅನುಭವವು ಯೋಗಮಾರ್ಗಕ್ರಮಣದಲ್ಲಿ ಉಂಟಾಗುವ ಅವ್ಯಕ್ತದ ಅಥವ ಮಹತ್ತಿನ ಕಾರ್ಯದ ಸೂಕ್ಷ್ಮಾವಸ್ಥೆಯ ಪ್ರತ್ಯಕ್ಷವಾಧುದರ ಅನುಭವವು. ಇನ್ನು ಯೋಗಸಿದ್ಧಿಯ ಪೂರ್ವಭಾವಿಯಾಗಿ ವ್ಯಕ್ತವಾಗುವ ಚಿಹ್ನೆಗಳನ್ನು ಈಗ ತಿಳಿಸಲಾಗುತ್ತದೆ.

ಲಘುತ್ವಮಾರೋಗ್ಯಮಲೋಲುಪತ್ವಂ ವರ್ಣಪ್ರಸಾದಂ
ಸ್ವರಸೌಷ್ಠವಂ ಚ।
ಗಂಧಃಶುಭೋ ಮೂತ್ರಮರೀಷಮಲ್ಪಂ ಯೋಗಪ್ರವೃತ್ತಿಂ
ಪ್ರಥಮಾಂ ವದಂತಿ॥ ಉ.೨.೧೩

[ಶರೀರ ಲಾಘವ (ಶಾರೀರಿಕ ಮತ್ತು ಮಾನಸಿಕ) ಆರೋಗ್ಯ, ವಿಷಯ ವಿತೃಷ್ಣೆ ಉಜ್ವಲ ಶರೀರಕಾಂತಿ, ಸ್ವರಮಾಧುರ್ಯ (ಶರೀರದ) ಮಧುರಗಂಧ ಮೂತ್ರ ಪುರೀಷಗಳ ಅಲ್ಪತೆ ಇವು ಮೊದಲುಂಟಾಗುವ ಯೋಗಪ್ರವೃತ್ತಿಯೆಂದು (ಯೋಗಿಗಳು) ಹೇಳುತ್ತಾರೆ.] ಹೀಗೆ ಯೋಗಮಾರ್ಗ ಕ್ರಮಿಸುತ್ತ ಹೋದ ಹೋದಂತೆ ಒಂದರಿಂದೊಂಧಿಕವಾದ ಪ್ರಗತಿಯು ಕಂಡುಬರುವದೆಂದು ಧ್ಯಾನ ಯೋಗಿಯು ತಿಳಿಸಿ, ಮಾರ್ಗಕ್ರಮಣದ ಸಾಧುತ್ವದ ಲಕ್ಷಣಗಳನ್ನು ಎತ್ತಿ ತೋರಿಸಿ ಆತ್ಮವಿಶ್ವಾಸಾಭಿವೃದ್ಧಿಗೆ ಹೆಚ್ಚಿನ ಚಾಲನೆಯನ್ನು ಉಂಟುಮಾಡುತ್ತಾನೆ. ಈಗ ಕೊನೆಯ ಗುರಿಯ ಸಾಕ್ಷಾತ್ಕಾರದ ವಿಚಾರವನ್ನು ಉಪನಿಷದ ಋಷಿಯು ತಿಳಿಸುವನು.

ಯದಾತ್ಮತತ್ತ್ವೇನ ತು ಬ್ರಹ್ಮತತ್ತ್ವಂ ದೀಪೋಪಮೇನೇಹ
ಯುಕ್ತಃ ಪ್ರಪಶ್ಯೇತ್ ।
ಅಜಂ ಧ್ರುವಂ ಸರ್ವತತ್ತ್ವೈರ್ವಿಶುದ್ಧಂ ಜ್ಞಾತ್ವಾ ದೇವಂ
ಮುಚ್ಯತೇ ಸರ್ವಪಾಶೈಃ। ಶ್ವೇ ಉ. ೨. ೧೫

[ಯೋಗಿಯು (ಅಂದರೆ ಧ್ಯಾನ ಯೋಗಿಯು, ತನ್ನ ಹೃದಯಕಮಲದಲ್ಲಿ ಪ್ರಕಾಶಸ್ವರೂಪನಾದ ಆತ್ಮನಿಂದ ಬ್ರಹ್ಮತತ್ತ್ವವನ್ನು ಯಾವಾಗ ನೋಡುತ್ತಾನೆಯೊ ಆಗ ಜನ್ಮರಹಿತನೂ ಅಚ್ಯುತ ಸ್ವರೂಪನೂ ಅವಿದ್ಯೆಯಿಂದ ಮತ್ತು ಅದರ ಕಾರ್ಯಗಳಿಂದ ಅಸಂಸ್ಪೃಷ್ಟನೂ ಆದ ದೇವನನ್ನು ಅರಿತುಕೊಂಡು ಸರ್ವಪಾಶಗಳಿಂದಲೂ ಮುಕ್ತನಾಗುತ್ತಾನೆ. ] ಹೀಗೆ ಧ್ಯಾನ್ಯಯೋಗದ ವಿವಿಧ ವಿಚಾರಗಳನ್ನು ಶ್ವೇತಾಶ್ವತರೋಪನಿಷತ್ತು ಪ್ರಕಟಪಡಿಸಿ, ಮಾನವನ ಕಲ್ಯಾಣಕ್ಕಾಗಿ ಈ ಅಶ್ರೌತ ಸಾಧನವನ್ನು ಶ್ರೌತಕರ್ಮವ್ಯವಸ್ಥೆಗೆ ಪರ್ಯಾಯವ್ಯವಸ್ಥೆಯ ಅಂಗವಾಗಿ ಪ್ರಸಿದ್ಧಪಡಿಸಿದೆ.

೩ ಭಕ್ತಿ

ಭಕ್ತಿ ಎಂಬುದು ದೇವರಲ್ಲಿಯೇ ಎಂದು ಅರ್ಥ. ಆದರೆ ವೇದದಲ್ಲಿ [ ಮಂತ್ರ ಮತ್ತು ಬ್ರಾಹ್ಮಣಗಳು ವೇದ ಎಂಬರ್ಥದಲ್ಲಿ ] ಈಶ್ವರನಿಗೆ ಸ್ಥಾನವೇ ಇರುವದಿಲ್ಲ. ವೇದವು ಸ್ವಯಂಭು ಎಂಬುದು ಸುಪ್ರಸಿದ್ಧವಾದಂಥ ವಾದವಾಗಿದೆ. ಯಜ್ಞಯಾಗಾದಿಗಳಿಗಾಗಿ ಬಳಸುವ ಮಂತ್ರಗಳಲ್ಲಿ ಬರುವ ದೇವರ ಹೆಸರು ಕೇವಲ ಶಾಬ್ದಿಕ. ಕಾರಣ ಭಕ್ತಿಯ ಮಾತೇ ಇರುವದಿಲ್ಲ. ಆದ್ದರಿಂದ ಭಕ್ತಿಯು ವೇದದ (ಶ್ರುತಿಯ) ಅನುಯಾಯಿಗಳ ದೃಷ್ಟಿಯಿಂದ ಅಥವ ವೇದದ ದೃಷ್ಟಿಯಿಂದ ಅಶ್ರೌತಕ್ಕೆ ಸೇರದ್ದು ಅಥವ ಅದು ಅಶ್ರೌತಸಾಧನ. ಇದು ಉಪನಿಷತ್ತಿನಲ್ಲಿ ಪ್ರತಿಪಾದಿತವಾಗಿರುವದರಿಂದ ಉಪನಿಷತ್ತಿನ ಅಶ್ರೌತಸಾಧನ. ಭಕ್ತಿಯೆಂಬುದು ಸೈಂಧವ ಸಂಸ್ಕೃತಿಯ ಶೈವದೊಡನೆ ಬೆಳೆದು ಬಂದಿದೆ. ಯಾಕಂದರೆ ಶೈವಯೋಗವು ಸೇಶ್ವರಯೋಗವು;

ಹೀಗೆ ಶೈವದ ಭಕ್ತಿಯು ಯೋಗದೊಡನೆ ಮತ್ತು ಸ್ವತಂತ್ರವಾಗಿಯೂ ವೇದ ಪೂರ್ವಕಾಲದಿಂದಲೂ ಅಸ್ತಿತ್ವದಲ್ಲಿದೆ. ಇದರ ನಂತರದ ವೇದ ಮತ್ತು ಉಪನಿಷತ್ತುಗಳ ಕಾಲದಲ್ಲಿ ಕ್ರಮವಾಗಿ ಪ್ರಬಲವಾಗಿ ಪ್ರಕಟಗೊಳ್ಳುತ್ತ ಬಂದಿದೆಯೆಂಬುದು ಸಹಜ ಮತ್ತು ಚಾರಿತ್ರಿಕ ಅಂಶವಾಗಿದೆ. ಉಪನಿಷತ್ತುಗಳು ಖಂಡಿಸಿದ ಶ್ರುತಿಯ (ವೇದದ)ಲ್ಲಿ ಭಕ್ತಿಯ ವಿಚಾರ ಇರಬೇಕಾದ ಪ್ರಮೇಯವೇ ಇರುವದಿಲ್ಲ. ಇದು, ಉಪನಿಷತ್ತುಗಳೆಂಬ ಶ್ರುತಿಯಲ್ಲಿಯ ವಿಚಾರವು, ಪ್ರಸ್ತುತ ಪ್ರಸಂಗದ ವಿಷಯ.

ಯೋಗದಲ್ಲಿ ಭಕ್ತಿಯು ಹುದುಗಿದಂತೆ ಉಪಾಸನೆಯಲ್ಲಿ ಭಕ್ತಿಯು ಹುದುಗಿರುತ್ತದೆ. ಈ ವಿಚಾರವನ್ನು ಉಪನಿಷತ್ ವಿಶಾರದರು ಗುರುತಿಸಿದ್ದಾರೆ. ಉಪಾಸನೆಗೆ ಬಹುಪಾಲು ಮೀಸಲಿರಿಸಿರುವ ಉಪನಿಷತ್ ಎಂದರೆ ಛಾಂದೋಗ್ಯವು. ಛಾಂದೋಗ್ಯ ಉಪನಿಷತ್ತು ಮೊದಲು ಸಾಮಾವಯವಗಳ ಉಪಾಸನೆಯನ್ನು ಹೇಳಿ, ನಂತರ ಸಮಸ್ತ ಸಾಮದ ಉಪಾಸನೆಯನ್ನು ಹೇಳುತ್ತದೆ. ಉಪಾಸನೆಯನ್ನು ಕುರಿತು ಹೇಳುವಾಗ ಸಾಮವನ್ನು ಪಾಂಚ ಭಕ್ತಿಕವೆಂದೂ, ಸಾಪ್ತ ಭಕ್ತಿಕವೆಂದೂ ವಿಂಗಡಿಸಿದೆ. ಈ ಸಂದರ್ಭದಲ್ಲಿ ಅದು ಬೇರೆ ಬೇರೆ ಉಪಾಸನೆಗಳನ್ನು ಹೇಳಿದೆ. ಇಲ್ಲಿ ಉಲ್ಲೇಖಿಸಲಾದ 'ಪಾಂಚಭಕ್ತಿ' ಮತ್ತು 'ಸಾಪ್ತಭಕ್ತಿ' ಎಂಬ ಭೇದಗಳನ್ನು ನೋಡಿ ಇಲ್ಲಿ ಸರ್ವೇಸಾಮಾನ್ಯವಾಗಿ ಅರ್ಥೈಸಿಕೊಳ್ಳುವಂತೆ ಇವು ಭಕ್ತಿಯ ಪ್ರಕಾರಗಳಲ್ಲಿ 'ಸಾಮವನ್ನು ಅವಯವಗಳಾಗಿ ವಿಂಗಡಿಸಿಕೊಂಡು ಉದ್ಗಾತೃವೇ ಮುಂತಾದವರು ಪಠಿಸುತ್ತಾರೆ. ಇದಕ್ಕೆ ಭಕ್ತಿಗಳು ಎಂದು ಸಂಜ್ಞೆ."[೪೮] ಇಲ್ಲಿಯ ನಿಯಮಕ್ಕನುಸರಿಸಿದ ಪಂಚ ಭಕ್ತಿಯೆಂದರೆ–ಸಾಮದ ಆದಿಯಲ್ಲಿ ಉದ್ಗಾತೃವು ಪಠಿಸುವ 'ಹಿಮ್'ಎಂಬ ಶಬ್ದವು **ಹಿಂಕಾರವು**; ಪ್ರಸ್ತೋತೃವು ಗಾನ ಮಾಡುವ ಸಾಮಾವಯವವು **ಪ್ರಸ್ತಾವವು**. ಉದ್ಗಾತೃವು ಗಾನ ಮಾಡುವ ಭಾಗವು **ಉದ್ಗೀಥವು**; ಪ್ರತಿಹರ್ತೃವು ಗಾನ ಮಾಡುವ ಭಾಗವು **ಪ್ರತಿಹಾರವು**; ಕೊನೆಯಲ್ಲಿ ಎಲ್ಲರೂ ಒಟ್ಟಾಗಿ ಮಾಡುವ ಗಾನಭಾಗವು ನಿಧನವು. ಇವು ಪಂಚ ಭಕ್ತಿಗಳು. ಇಲ್ಲಿ ಬರುವ 'ಭಕ್ತಿ' ಎಂಬ ಪದವು ಶ್ವೇತಾಶ್ವತರೋಪನಿಷತ್ತಿನಲ್ಲಿ ಉಲ್ಲೇಖಗೊಂಡ 'ಭಕ್ತಿ' ಎಂಬ ಪದದ ಅಥವ ಆಗಮಗಳಲ್ಲಾಗಲಿ, ಭಕ್ತಿ ಸೂತ್ರಗಳಲ್ಲಾಗಲಿ, ಪಂಚರಾತ್ರಾಗಮಗಳಲ್ಲಾಗಲಿ, ಶಾಕ್ತಾಗಮಗಳಲ್ಲಾಗಲಿ ದೊರೆವ 'ಭಕ್ತಿ' ಪದದ ಅರ್ಥವನ್ನು ಕೊಡುವದಿಲ್ಲ. ಬೃಹದಾರಣ್ಯಕವು ಉಪಾಸಕನು ತಾನು ಬೇರೆ, ದೇವರು ಬೇರೆ ಎಂದು ತಿಳಿದುಕೊಂಡು ಉಪಾಸನೆ (ಪೂಜೆ) ಯನ್ನು ಮಾಡಿದರೆ ಉಪಾಸಕನು ಪಶುವಾಗುವನು ಎಂದು ಹೇಳುವಲ್ಲಿ ಭಕ್ತಿಯ ತತ್ತ್ವಜ್ಞಾನ ಮತ್ತು ಭಕ್ತಿ ಇವೆರಡೂ

---

೪೮. ಛಾಂದೋಗ್ಯ ಭಾಷ್ಯ, ಪ್ರಸ್ತಾವನೆ. ಆಧ್ಯಾತ್ಮ ಪ್ರಕಾಶನ ಕಾರ್ಯಾಲಯ ಹೊಳೆನರಸೀಪುರ (೧೯೬೪).

ಅಂಕುರಿಸಿವೆ. ಬೃಹದಾರಣ್ಯಕವು ೪೯ 'ಉಪಾಸನೆ' ಎಂಬ ಪದವನ್ನೇ ಬಳಸಿದ್ದು ದು ಉಲ್ಲೇಖನೀಯವಾಗಿದೆ. ರಕ್ಷಣೆ, ಮಾರ್ಗದರ್ಶನ, ಶಾಂತಿ, ಸಮೃದ್ಧಿಗಳಿಗಾಗಿ ಮಾಡಿಕೊಂಡ ಪ್ರಾರ್ಥನೆಗಳು ಭಕ್ತಿಭಾವ ಪ್ರೇರಿತವಾಗಿವೆ.

ಕುಮಾರಶ್ಚಿತ್ ಪಿತರಂ ವಂದಮಾನಂ ಪ್ರತಿ ನಾನಾಮ
ರುದ್ರೋಪಯಂತಮ್ ।
ಭೂರೇರ್ದಾತಾರಂ ಸತ್ಪತಿಂ ಗೃಣೀಷೇಸ್ತುತಸ್ತ್ವಂ
ಭೇಷಜಾರಾಸ್ಯಸ್ಮೇ ॥– ಋಗ್ವೇದ, ರುದ್ರಸ್ತವ

[ಎಲೈ ರುದ್ರನೇ ! ತಂದೆಯನ್ನು ನಮಿಸಲು ಪುತ್ರನು ಬಳಿಸಾರುವಂತೆ ನಾನು ನಿನ್ನ ಬಳಿಸಾರುತ್ತೇನೆ. ಬಹು ಉದಾರಿಯಾದ, ನನ್ನ ಒಡೆಯನಾದ ನಿನ್ನನ್ನು ಸ್ತುತಿಸುತ್ತೇನೆ. ನಾನು ಸ್ತುತಿಸಿದ ಮೇಲೆ ನನಗೆ ಔಷಧಿ ಪ್ರಧಾನ ಮಾಡು.] ಈ ಸ್ತುತಿಯು ಭಕ್ತಿಯ ಪ್ರಭೇಧಗಳಿಗೆ ನಾಂದಿ ಹೇಳಿದೆ. ರುದ್ರನ ಭಕ್ತನು ರುದ್ರನಿಂದ ಕಲ್ಯಾಣ ಪ್ರಾಪ್ತಿಗಾಗಿ ಪ್ರಾರ್ಥನೆಯನ್ನು ಮಾಡಿಕೊಳ್ಳುವ ಮೂಲಕ ತನ್ನ ಭಕ್ತಿಯನ್ನು ವ್ಯಕ್ತಗೊಳಿಸಿದ್ದಾನೆ. ಈ ಪ್ರಾರ್ಥನೆಯಲ್ಲಿ ಪುತ್ರಭಕ್ತಿ ಮತ್ತು ದಾಸ್ಯಭಕ್ತಿಗಳನ್ನು ನೋಡುತ್ತೇವೆ. ಮೊದಲು ತಂದೆಯ ಬಳಿ ಪುತ್ರನು ಸಾರುವಂತೆ ರುದ್ರನ ಬಳಿ ಸಾರುವ ಅಭೀಷ್ಟವನ್ನು ವ್ಯಕ್ತಗೊಳಿಸಿದ್ದು ಪುತ್ರಭಕ್ತಿಯಾಗಿದೆ. ಎರಡನೆಯ ಮಾತಿನಲ್ಲಿ ರುದ್ರನು ಒಡೆಯನೆಂದು ಪರಿಗಣಿಸಿ ಪ್ರಾರ್ಥಿಸಿರುವುದು ದಾಸ್ಯಭಕ್ತಿಯಾಗಿರುತ್ತದೆ. ಇವುಗಳನ್ನೇ ಶಿವಾಗಮಗಳು, ತದನಂತರ ಪಂಚರಾತ್ರಾಗಮಗಳು ಅನುಕ್ರಮವಾಗಿ ಸತ್ಪುತ್ರಮಾರ್ಗ ಮತ್ತು ದಾಸ್ಯಮಾರ್ಗಗಳೆಂದು ಹೆಸರಿಸಿವೆ. ಇವು ಎರಡೂ ಆಗಮ ಸಾಹಿತ್ಯದ ಚತುರ್ವಿದ ವರ್ಗೀಕರಣಕ್ಕೆ ಪ್ರಾರಂಭದಲ್ಲಿಯ ಚರ್ಯಾ ಮತ್ತು ಕ್ರಿಯಾಪಾದಗಳ ಅಸ್ತಿವಾರವನ್ನು ಹಾಕಿರುತ್ತವೆ.೫೦ ಋಗ್ವೇದದ IX 4.22: ೫೧ ಮಂತ್ರ, ಸಾಮವೇದದ I.91, ಮಂತ್ರ ಸದ್ಗುಣಗಳ ಪ್ರದಾನಕ್ಕಾಗಿ ಮಾಡಿದ ಪ್ರಾರ್ಥನೆಗಳು. ಯಜರ್ವೇದ ೫೨XiX.9 ಮಂತ್ರವೂ ಪ್ರಾರ್ಥನೆ. ಈ ಪ್ರಾರ್ಥನೆಗಳು ನಂತರ ಭಕ್ತಿ ಗೀತಗಳಿಗೆ ೫೩ ಪ್ರೇರಣೆಯಾಗಿವೆ.

---

೪೯. ಬೃಹದಾರಣ್ಯೋಕೋಪನಿಷತ್-I. 4.10.
೫೦. Swami Sambuddhanande (Ed). Vedic Prayers. Rama Krishna Ashrama Kar, Bombay (1945).
೫೧. Ibid " "
೫೨. Ibid " "
೫೩. ಷಡಕ್ಷರದೇವ. ಶಿವಸ್ತವ ಮಂಜರಿ ಶ್ರೀವಿದ್ಯಾ ಪ್ರಕಾಶನ. ಧಾರವಾಡ (1990).
* ಡಾ. ಜಚನಿ, ರುದ್ರದೇವನ ವಿಶ್ವವೈಭವ ಕ್ರಾಂತಿ ಪು. ೬೦ ಶ್ರೀ. ಜಚನಿ ಅಧ್ಯಯನಪೀಠ ಮತ್ತು ಸಂಶೋಧನ ಸಂಸ್ಥೆ ಬೆಂಗಳೂರ. (1988).

ಭಕ್ತಿಯ ಇನ್ನೊಂದು ವಿಚಾರವನ್ನು ಈ ಸಂದರ್ಭದಲ್ಲಿ ಮಾಡಬೇಕು. ಭಕ್ತನು ದೇಹದಂಡನೆಯನ್ನು, ಮನೋ ನಿಗ್ರಹವನ್ನು, ಇಂದ್ರಿಯ ನಿಗ್ರಹವನ್ನು ಮಾಡುವ ಮೂಲಕ ದೇವರಲ್ಲಿ ತನ್ನ ಅಚಲ ನಿಷ್ಠೆಯನ್ನು, ಶ್ರದ್ಧೆಯನ್ನು, ಏಕೇಶ್ವರವಾದ ವನ್ನು ಅಭಿವ್ಯಕ್ತಗೊಳಿಸುತ್ತಾನೆ. ಭಕ್ತಿಯ ಉತ್ಕಟತೆ ಕಠಿಣ ತಪವೇ ಆಗಿರುತ್ತದೆ. ಭಕ್ತನ ಮನ ಬುದ್ಧಿ ಚಿತ್ತ ಮತ್ತು ಬಾಹ್ಯೇಂದ್ರಿಯಗಳೆಲ್ಲ ಆರಾಧ್ಯ ಮೂರ್ತಿ ಯಲ್ಲಿಯೆ ಬಂಡುಂಬುವ ತುಂಬಿಯಂತೆ ಬಾಹ್ಯಪ್ರಜ್ಞೆ ಇಲ್ಲದೆ ಇರುವಂತೆ ಇರುತ್ತವೆ. ಉಪನಿಷತ್ತು ತಪಸ್ಸು ಎಂದು ಯಾವಕ್ರಿಯೆಗಳನ್ನು ಸಂಬೋಧಿಸುತ್ತದೆಯೋ ಅವು ಭಕ್ತಿಯ ಕ್ರಿಯೆಗಳೇ ಆಗಿರುತ್ತವೆ. ಕೇನೋಪನಿಷತ್ತು (೪,೮) ಬ್ರಹ್ಮದ ಪ್ರತಿಷ್ಠೆ ಯನ್ನು ಕುರಿತು ಹೇಳುವದು. ತಪವು ಬ್ರಹ್ಮ ಪ್ರತಿಷ್ಠೆಗೊಳಿಸುವುದು ಎಂದು ಹೇಳುತ್ತದೆ. ಭಕ್ತನಲ್ಲಿ ದೇವತಾಪ್ರತಿಷ್ಠೆಯೇ 'ಶರಣು' ಎಂದು ಶ್ವೇತಾಶ್ವತ ರೋಪನಿಷತ್ತು ಕೇನೋಪನಿಷತ್ತಿನ ಮಂತ್ರ (೪.೮) ವನ್ನೇ ಸಮರ್ಥಿಸುತ್ತದೆ. ಮುಂದೆ ಶೈವಾಗಮಗಳು ಈ ವಿಚಾರವನ್ನು ಪ್ರಣಾಲಿಯ ಸ್ವರೂಪೀಕರಿಸುತ್ತವೆ. ಬೌದ್ಧ ಧರ್ಮದಕಿಂತಲೂ ಹೆಚ್ಚು ವ್ಯಾಪಕವಾಗಿ, ಸಾಧನ ಪಥವಾಗಿ ಅನುಷ್ಠಾನಕ್ಕೆ ತಂದಿವೆ. 'ಭವಚಕ್ರದ' ಅಥವ 'ಬ್ರಹ್ಮಚಕ್ರದ' ವಿಚಾರವೂ ಕೂಡ ಅಷ್ಟೇ. ಬ್ರಹ್ಮ ಚಕ್ರದ ಮತ್ತೊಂದು ಹೆಸರಾದ 'ಭವಚಕ್ರ'ವನ್ನು ಒಂದೇ ಶಬ್ದದಲ್ಲಿ ಅರ್ಥವಾಗು ವಂತೆ 'ಭವ' ಎಂಬುದನ್ನಷ್ಟೇ ಬಳಸಿ ರೂಢ ಗೊಳಿಸಿದೆ. ಇದರ ಪ್ರಯೋಜನವನ್ನು ಬೇರೊಂದು ರೀತಿಯಿಂದ ಮಾಡಿಕೊಂಡಿದ್ದು, 'ಭಕ್ತ'ನಲ್ಲದವ ಎಂಬರ್ಥವನ್ನದಕ್ಕೆ ಕೊಟ್ಟಿದುಂಟು. ಸಂಘವನ್ನು ಗುರುತಿಸುವದಕ್ಕಾಗಿ ಸಂಘಹೊಲ್ಲವಾದವರು 'ಭವಿ' ಎಂದು ಪ್ರಯೋಗಿಸಿದೆ. ಇದು 'ಭಕ್ತಿ'ಯ ಸುತ್ತು ಮುತ್ತು ಬೆಳೆದ ವಿಚಾರಗಳಿಗೆ ಮತ್ತು ಆಚಾರಗಳಿಗೆ ಸಾಕ್ಷಿ. ಹೀಗೆ 'ಭಕ್ತ' ಮತ್ತು 'ಭಕ್ತಿ' ಪದಗಳು ಆಧ್ಯಾತ್ಮಿಕ ಜೀವನದ ಹೊಸ ಆಯಾಮಕ್ಕೆ ಕಾರಣ. ಇಂಥ ಕಾರ್ಯ ಪ್ರಣಾಲಿಗೆ ಕಾರಣವಾದ 'ಭಕ್ತಿ' ವಿಚಾರವನ್ನು ಶ್ವೇತಾಶ್ವತರೋಪನಿಷತ್ತು ಪ್ರತಿಪಾದಿಸಿ ಭಾರತೀಯ ಆಧ್ಯಾತ್ಮಿಕ ಜೀವನದಲ್ಲಿ ಕ್ರಾಂತಿಕಾರಕ ಹೊಸ ಬಾಗಿಲವನ್ನೇ ತೆರೆದಿದೆ.

ಸ್ವಾಮೀ ಆದಿದೇವಾನಂದರು ಈ ಉಪನಿಷದ್ವಿಚಾರವಾಗಿ ಹೇಳಿದ ಕೆಲ ಗಮನಾರ್ಹ ಮಾತುಗಳು ಇಂತಿವೆ-ಶ್ವೇತಾಶ್ವತರೋಪನಿಷತ್ತಿನಲ್ಲಿ, ಇತರ ಉಪ ನಿಷತ್ತುಗಳಲ್ಲಿ ಉಪಾಸನೆಯ ಹೆಸರಿನಲ್ಲಿ ಭಕ್ತಿಯು ಧ್ವನಿತವಾಗಿದ್ದರೂ ಅದು ಊಹೆಗೆ ಸ್ವಲ್ಪವೂ ಅವಕಾಶವನ್ನು ಬಿಡದೆ ಸ್ಪಷ್ಟವಾಗಿ ಪ್ರತಿಪಾದಿತವಾಗಿದೆ. ಆರನೆಯ ಅಧ್ಯಾಯದ ಕೊನೆಯ ಮಂತ್ರದಲ್ಲಿ ಪರಾಭಕ್ತಿ ಎಂಬ ಶಬ್ದವೇ ಬಂದಿದೆ; ಶರಣಂ ಪ್ರಪದ್ಯೇ ಎಂಬ ಪದಗಳು ಶರಣಾಗತಿಯನ್ನು ಕೂಡ ಪುಷ್ಟೀಕರಿಸುತ್ತವೆ. ಮುಂದೆ ಭಕ್ತಿ ಸೂತ್ರಗಳಲ್ಲಿಯೂ ಭಕ್ತಿ ಶಾಸ್ತ್ರಗಳಲ್ಲಿಯೂ ಭಕ್ತಿ ಶಬ್ದವು ಹೇಗೆ ವೈವಿಧ್ಯ ಪೂರ್ಣವೂ ವ್ಯಾಪಕವೂ ಆದ ಅರ್ಥವನ್ನು ಸಂಪಾದಿಸಿತೆಂಬುದು ಎಲ್ಲರಿಗೂ

ತಿಳಿದ ವಿಷಯ.೫೪" ಶ್ವೇತಾಶ್ವತರೋಪನಿಷತ್ತು ಶೈವ ಶಾಸ್ತ್ರಗಳಿಗೆ, ವೈಷ್ಣವ ಶಾಸ್ತ್ರಗಳಿಗೆ, ಮತ್ತು ಶಾಕ್ತ ಶಾಸ್ತ್ರಗಳಿಗೆ, ಅದೇ ರೀತಿ ಬೌದ್ಧ ಶಾಸ್ತ್ರಕ್ಕು ಕೂಡ 'ಶರಣು' ಅಂದರೆ ಪರತತ್ತ್ವದ ಆಶ್ರಯ ಪಡೆಯುವ ಮಾತು ವೈಚಾರಿಕ ಮತ್ತು ಭಕ್ತಿಯ ಮಹಾಮಂದಿರಕ್ಕೆ ಅಡಿಗಲ್ಲನ್ನು ಹಾಕಿದೆ. ಇಲ್ಲಿ ಈ ಉಪನಿಷತ್ತಿನ ಚಾರಿತ್ರಿಕ ವಿಚಾರದ ಮಾತೊಂದನ್ನು ಹೇಳಲೆ ಬೇಕಾಗಿದೆ. ಯಾಕಂದರೆ ಕೆಲವು ಆಸ್ತಿಕ ವಿದ್ವಾಂಸರು ಶ್ವೇತಾಶ್ವತರೋಪನಿಷತ್ತು ಬುದ್ಧನ ನಂತರದ್ದು ಎಂದು ಬರೆದಿದ್ದಾರೆ. ಇದು ಅಸಮಂಜಸ ತರ್ಕವಾಗಿದೆ. ಯಾಕಂದರೆ ಅಶ್ವಘೋಷನು ಬುದ್ಧಚರಿತ್ರೆಯಲ್ಲಿ ಆಲಾರ ಕಾಲಾಮ ಮತ್ತು ರುದ್ರಕ ರಾಮಪುತ್ರರೆಂಬ ಇಬ್ಬರು ಋಷಿಗಳು ಬುದ್ಧನಿಗೆ ಧಾರಣ ಶಾಸ್ತ್ರವನ್ನು ಮತ್ತು ಧ್ಯಾನ ಯೋಗವನ್ನು ಬೋಧಿಸಿದ್ದು, ಅವರು ಶ್ವೇತಾಶ್ವತರೋಪನಿಷತ್ತನ್ನು ಈ ಕಾರ್ಯಕ್ಕಾಗಿ ಬಳಸಿಕೊಂಡುದನ್ನು ತಿಳಿಸುತ್ತಾನೆ. ಬೌದ್ಧರ ಧ್ಯಾನ ಯೋಗದ ಮೂಲಬೇರಗಳು ಉಪನಿಷತ್ತುಗಳಲ್ಲಿಯೇ ಇರುತ್ತವೆ. ಯೋಗ ಪ್ರಧಾನ ಮತ್ತು ಭಕ್ತಿ ಪ್ರಧಾನವಾದ ಶೈವವು ಬುದ್ಧನಕಿಂತಲೂ, ಶ್ವೇತಾಶ್ವೇತರಾದಿ ಉಪನಿಷತ್ತುಗಳಗಿಂತಲೂ ಪ್ರಾಚೀನ ವೆಂಬುದನ್ನು ನೋಡಿದ್ದೇವೆ. ಆದ್ದರಿಂದ ಭಕ್ತಿಯಂತೆ ಬ್ರಹ್ಮಚಕ್ರ, ಶರಣು ಎಂಬ ವಿಚಾರಗಳು ಬೌದ್ಧ ಧರ್ಮ ಸಂಸ್ಥಾಪಕ ಬುದ್ಧನ ಮೇಲೆ ಪ್ರಭಾವ ಬೀರಿವೆ. ಶ್ವೇತಾಶ್ವತರೋಪನಿಷತ್ತು ತನ್ನ ನೇರವಾದ ಪ್ರಭಾವ ಬೀರಿರುವುದರಲ್ಲಿ ಸಂದೇಹವಿಲ್ಲ. ರುದ್ರ ತತ್ತ್ವದ ಕ್ಷಣಿಕತೆಯ ಲಕ್ಷಣವು ಬುದ್ಧನಿಗೆ ಕ್ಷಣಿಕತೆಯನ್ನು ಒಂದು ಪ್ರಣಾಲಿಯನ್ನಾಗಿ ರೂಪಿಸಲು ಮಾರ್ಗದರ್ಶನ ಮಾಡಿದೆ. ಬುದ್ಧನು ತನ್ನ ಕಾಲದ ಮತ್ತು ಪೂರ್ವದ ಪಂಗಡಕ್ಕೆ ಅಂದರೆ ವ್ರಾತ್ಯ ಪಂಗಡಕ್ಕೆ ಸೇರಿದವನಾದ್ದರಿಂದ ಶೈವದ ವಿವಿಧ ಸ್ವರೂಪದ ವಿಚಾರಗಳನ್ನು ಅವನು ವೇದೋಪನಿಷತ್ತುಗಳ ಅಧ್ಯಯನದಿಂದ ಅರಿತುಕೊಂಡಿದ್ದನು. ತನ್ನ ಉದ್ಧಾರವನ್ನು ತಾನು ಮಾಡಿಕೊಳ್ಳಬೇಕು ಎಂದು ಬೋಧಿಸಿದ ಬುದ್ಧನು 'ಬುದ್ಧಂ ಶರಣಂ ಗಚ್ಛಾಮಿ. ದಮ್ಮಂ ಶರಣಂ ಗಚ್ಛಾಮಿ. ಸಂಘಂ ಶರಣಂ ಗಚ್ಛಾಮಿ' ಎಂದು ಮುಂತಾಗಿ ಬೋಧಿಸುವ ಮೂಲಕ ಬೌದ್ಧ ಧರ್ಮದ ಕೇಂದ್ರ ತತ್ತ್ವವನ್ನಾಗಿ ಮಾಡಿಕೊಂಡುದು, ಶೈವದ ಪ್ರಭಾವವು ಅತಿಶಯವಾದರೀತಿಯಲ್ಲಿ ಆತನ ಮೇಲೆ ಆಗಿರುವುದಕ್ಕೆ ಇದೊಂದು ಅತ್ಯಂತ ಪ್ರಬಲವಾದ ಸಾಕ್ಷಿಯಾಗಿದೆ. ಭಾರತೀಯ ಸನ್ಯಾಸ ಧರ್ಮಕ್ಕೆ ಆದರ್ಶ ಪ್ರಾಯನಾದವನು ಶಿವನು. ಈತನ ಸನ್ಯಾಸ ಧರ್ಮದ ಪ್ರಭಾವವು ಬುದ್ಧನ ಮೇಲೆ ಆಗಿರಬಹುದಲ್ಲವೆ ? ಶ್ವೇತಾಶ್ವತರೋಪ

---

೫೪ ಸ್ವಾಮೀ ಆದಿದೇವಾನಂದ, ಶ್ವೇತಾಶ್ವತರೋಪನಿಷತ್ (ಮೂಲ ಪ್ರತಿಪದಾರ್ಥ ತಾತ್ಪರ್ಯ ಟಿಪ್ಪಣಿಗಳೊಡನೆ), ಪು-೨-೩ ರಾಮಕೃಷ್ಣಾಶ್ರಮ ಮೈಸೂರ (1962).

ನಿಷತ್ತಿನ ಹಲವಾರು ವಿಚಾರಗಳು ಶೈವ ಮೂಲದವು ಎಂದು ಹೇಳುವುದು ಹೆಚ್ಚು ಸಮಂಜಸವೆಂದು ತೋರುತ್ತದೆ. ಶ್ವೇತಾಶ್ವತರೋಪನಿಷತ್ತು ಶೈವದ ಭಕ್ತಿ ಶಾಸ್ತ್ರದ ಪ್ರಥಮ ಪತ್ಯ. ಶೈವರಂತೆ ಉಳಿದ ಮತಪಂಥದವರೂ ಕೂಡ ಅಷ್ಟೇ ಗೌರವ ವಿಶ್ವಾಸಗಳಿಂದ ಶ್ವೇತಾಶ್ವತರೋಪನಿಷತ್ತನ್ನು ಕಾಣುತ್ತಾರೆ. ಭಕ್ತಿಯ ವಿಚಾರ ಬಂದಾಗ ಉಪನಿಷತ್ತುಗಳ ಕಡೆಗೆ ಹೊರಳಿದಾಗ ಎದ್ದು ಕಾಣುವ ಉಪನಿಷತ್ತೆಂದರೆ ಶ್ವೇತಾಶ್ವತರೋಪನಿಷತ್ತೆಂದೇ ಹೇಳದೆ ಗತ್ಯಂತರವಿಲ್ಲ. ಆಧ್ಯಾತ್ಮ ಬದುಕಿನ, ವಿಚಾರದ ವಿಶಾರದರ ಗಮನವನ್ನು ಸೆಳೆದ ಈ ಉಪನಿಷತ್ತು ಅಶ್ರೌತ ಸಾಧನಗಳಲ್ಲಿ ಒಂದಾದ ಭಕ್ತಿಯನ್ನು ಕುರಿತು ಹೇಳುವದನ್ನು ನೋಡುವಾ.

ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ ।
ತಸ್ಯೈ ತೇ ಕಥಿತಾ ಹ್ಯರ್ಥಾಃ ಪ್ರಕಾಶಂ ತೇ ಮಹಾತ್ಮನಃ
ಪ್ರಕಾಶಂತೇ ಮಹಾತ್ಮನಃ ॥ ಶ್ವೇ. ಉ. ೬. ೨೩.

[ ಯಾವನಿಗೆ ಪರಮೇಶ್ವರನಲ್ಲಿ ಪರಾಭಕ್ತಿಯಿರುವುದೋ, ಪರಮೇಶ್ವರನಲ್ಲಿ ಇದ್ದ ಹಾಗೆ ಗುರುವಿನಲ್ಲಿಯೂ ಪರಾಭಕ್ತಿಯಿರುವುದೋ, ಅಂಥ ಮಹಾತ್ಮನಿಗೆ ಹೇಳಲ್ಪಟ್ಟ ಈ ಅರ್ಥಗಳು ಪ್ರಕಾಶವಾಗುತ್ತವೆ, ಅಂಥ ಮಹಾತ್ಮನಿಗೆ (ಹೇಳಲ್ಪಟ್ಟ ಈ ಅರ್ಥಗಳು) ಪ್ರಕಾಶವಾಗುತ್ತವೆ. ] ಇಲ್ಲಿ ಪ್ರಯೋಗಿಸಲಾದ 'ಪರಾಭಕ್ತಿ' ಎಂಬ ಪದವನ್ನು ಉಪನಿಷತ್ತಿನ ವಿಚಾರಪ್ರವಾಹದ ಹಿನ್ನಲೆಯಲ್ಲಿಯೇ ಅರ್ಥೈಸಬೇಕು ಎಂದು ಕಾಣುತ್ತದೆ. 'ಪರಾ ಭಕ್ತಿ' ಈ ಪದದ ವಿರುದ್ಧವಾದ ಪದವೆಂದರೆ 'ಅಪರಾಭಕ್ತಿ'. 'ಪರಾಭಕ್ತಿ'ಯು ಪರಬ್ರಹ್ಮನೆ ತಾನೆಂಬ ನೆನಪನ್ನು ತಂದರೆ, 'ಅಪರಾ ಭಕ್ತಿ'ಯು' ಅಪರಾಬ್ರಹ್ಮ'ನನ್ನು ನೆನಪಿಗೆ ತರುತ್ತದೆ. ಈ ಸಂದರ್ಭದಲ್ಲಿ ಬೃಹದಾರಣ್ಯಕೋಪನಿಷತ್ತಿನ ಮಾತೊಂದು ಸಮಯಕ್ಕೆ ತಕ್ಕಂತೆ ಬಂದುದೆಂದು ತೋರುತ್ತದೆ. ಅದು ೧.೪.೧೦ ನೇ ಮಂತ್ರದಲ್ಲಿ ನೀನು ಬೇರೆ, ನೀನು ಉಪಾಸನೆಯನ್ನು ಮಾಡುವ ದೇವರು ಬೇರೆ ಎಂದು ತಿಳಿದದ್ದಾದರೆ ನೀನು ಪಶುವಾಗುತ್ತಿ ಎಂಬ ಎಚ್ಚರಿಕೆಯ ಮಾತು. ಇದರ ಪ್ರಕಾರ ಉಪಾಸಕನು ಅಂದರೆ ಭಕ್ತನು ತಾನು ಉಪಾಸನೆಯನ್ನು ಮಾಡುವ ದೇವರು ಮತ್ತು ತಾನು ಬೇರೆ ಬೇರೆ ಅಲ್ಲ ಎಂದೇ ಭಾವಿಸಬೇಕೆಂಬುದೇ ಉಪನಿಷತ್ತಿನ ಉಪದ್ದೇಶ, ಆದೇಶ. ಆದ್ದರಿಂದ ಉಪನಿಷತ್ತುಗಳು ಹೇಳುವದು ಪರಾಭಕ್ತಿಯನ್ನೆ. ಇದು ಉಪನಿಷತ್ತುಗಳ ತಾತ್ವಿಕ ಪ್ರಣಾಲಿಗೆ ಅನುಗುಣವಾಗಿಯೇ ಇರುತ್ತದೆ. ಈ ತರದ ಭಕ್ತಿಯ ಆಚರಣೆಯನ್ನು 'ಅಹಂಗ್ರೋಪಾಸನೆ' ಎಂದು ಹೆಸರಿಸಿದ್ದು. ಬ್ರಹ್ಮ ಸೂತ್ರ ಭಾಷ್ಯಗಳಲ್ಲಿ ಈ ಪದದ ಪ್ರಯೋಗವಿರುತ್ತದೆ.

ಇದನ್ನು ಶ್ರೀಕರ ಭಾಷ್ಯವು[೫೫] ವಿವರಿಸಿದ್ದು (೪.೧.೨.೩) ಹೀಗಿದೆ– "ಅಧಿಕಂ ತು ಭೇದನಿರ್ದೇಶಾತ್," "ವಿಶ್ವಾಧಿಕೋ ರುದ್ರಃ" ಎಂಬ ಶ್ರುತಿಗಳ ಪ್ರಕಾರ ಜೀವನು ತನಗಿಂತ ಉತ್ಕೃಷ್ಟನಾದ ಶಿವನನ್ನೇ ತಾನೆಂದು ಭಾವಿಸಿ ಉಪಾಸನೆ ಮಾಡುವುದೇ ಅಹಂಗ್ರೋಪಾಸನವೆನಿಸುತ್ತದೆ." ಈ ಭಕ್ತಿ ಪ್ರಣಾಲಿಯ ಇನ್ನೊಂದು ಹೊಸ ವಿಚಾರವನ್ನಿಲ್ಲಿ ಗುರುತಿಸಬಹುದಾಗಿದೆ. ಅದನ್ನೀಗ ನೋಡುವಾ.

ಸರ್ವೇಂದ್ರಿಯ ಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಮ್ ।
ಸರ್ವಸ್ಯ ಪ್ರಭುಮೀಶಾನಂ ಸರ್ವಸ್ಯ ಶರಣಂ ಬೃಹತ್ ॥
ಶ್ವೇ. ಉ. ೩.೧೭.

[ (ಆಜ್ಞೇಯ ವಸ್ತುವು) ಎಲ್ಲಾ ಇಂದ್ರಿಯಗಳ ಗುಣಗಳಿಂದ ಬೆಳಗುತ್ತಿದೆ, ಸರ್ವೇಂದ್ರಿಯ ರಹಿತವಾದದ್ದು. (ಅದು) ಎಲ್ಲಕ್ಕು ಪ್ರಭು ಮತ್ತು ಈಶಾನ. (ಅದು) ಎಲ್ಲಕ್ಕೂ ಪರಾಯಣ ಮತ್ತು ಕಾರಣ. ] ಇಲ್ಲಿ 'ಶರಣಂ' ಶಬ್ದಕ್ಕೆ 'ಪರಾಯಣ' ಎಂಬ ಶಬ್ದವನ್ನು ಬಳಸಿದ್ದು ಅದರ ಅರ್ಥ–ಗುರಿ, ಗಮ್ಯಸ್ಥಾನ ಎಂದಿದೆ. ಆದರೆ ಇನ್ನೂ ಒಂದು ಬೇರೆ ಶಬ್ದವು 'ಶರಣಂ' ಶಬ್ದಕ್ಕೆ ಬಳಸಬಹುದು. ಆ ಶಬ್ದವೆಂದರೆ ಆಶ್ರಯ. ಅದು ಎಲ್ಲಕ್ಕೂ ಆಶ್ರಯ ಎಂದರೆ ಹೆಚ್ಚು ಅರ್ಥ ಪೂರ್ಣವೆಂದು ಕಾಣುತ್ತದೆ. ಮಾಕ್ಸ ಮುಲ್ಲರನು Refuge ಎಂಬ ಪದ ಬಳಸಿದ್ದು 'ಆಶ್ರಯ' ಎಂಬ ಪದವನ್ನು ಪ್ರಸ್ತುತ ಲೇಖಕರು ಗುರಿ ಎಂಬ ಪದಕ್ಕಿಂತ ಹೆಚ್ಚು ಸಮಂಜಸವವೆಂದು ಪರಿಗಣಿಸಲು ನೆರವಾಗಿದೆ. ಪ್ರಪಂಚದ ಪಡಿ ಪದಾರ್ಥಗಳಿಗೆಲ್ಲ ದೇವನೊಬ್ಬನೆ ಆಶ್ರಯ ಸ್ಥಾನ. ಇದು ಒಪ್ಪಬೇಕಾದ ಮಾತೆ. ಭಕ್ತಿ ಪಂಥದವರು ಪರಬ್ರಹ್ಮವನ್ನೇ ಆಶ್ರಯಿಸುವರೇ ವಿನಾ ಬೇರೊಂದಾವುದನ್ನೂ ಅಲ್ಲ. ಇದೇ ಪ್ರಕಾರ ದೇವರೂ ಸಹಿತ ಭಕ್ತನನ್ನು ಆಶ್ರಯಿಸುತ್ತಾನೆ. ಭಕ್ತನಲ್ಲ ದಿದ್ದರೆ ಬೇರಾವ ಆಶ್ರಯವೂ ದೇವನಿಗಿಲ್ಲ. ಈ ಎರಡೂ ಮಾತುಗಳು ಆಗಮ ಸಾಹಿತ್ಯದಲ್ಲಿ ಬಂದೇ ಬರುತ್ತವೆ. ಇದು ಶೈವ ಆಗಮಗಳ ಪ್ರಣಾಲಿಯ ಮೂಲ ಮಾತೃಕೆ ಎಂದು ಹೇಳಬೇಕಾಗುತ್ತದೆ. ಶೈವಧರ್ಮವನ್ನು ಶರಣಧರ್ಮ ಎಂದು ಗುರುತಿಸುವ ಶೈವಪ್ರಭೇದಕೂಡ ಒಂದು ಉಂಟು. ಹೀಗೆ. 'ಶರಣ' ಪದದ

---

೫೫. ಕಾಸು ಚಿದ್ವಿದ್ಯಾಸು "ಅಧಿಕಂ ತು ಭೇದ ನಿರ್ದೇಶಾತ್". "ವಿಶ್ವಾಧಿಕೋ ರುದ್ರಃ" ಇತ್ಯಾದಿ ಶಾಸ್ತ್ರಾನುಸರಣೇನ ಜೀವಸ್ಯ ಸ್ವಾಭಿನ್ನತಯಾ ಬ್ರಹ್ಮೋಪಾಸನಂ ದರ್ಶಿತಂ ತದೇವಾಹಂಗ್ರಹೋಪಾಸನಂ" ಶ್ರೀಕರ ಭಾಷ್ಯಂ. 'ಜೀವ ಬ್ರಹ್ಮ ಭೇದಾಭೇದ ಪ್ರತಿಪಾದಕಂ ಬ್ರಹ್ಮಮೀಮಾಂಸಾ ಸೂತ್ರ ಭಾಷ್ಯಂ' ಶ್ರೀ ಪತಿ ಪಂಡಿತ ಭಗವತ್ಪಾದಾಚಾರ್ಯ ವಿರಚಿತಂ ಕರ್ನಾಟಕಾನುವಾದ ಸಹಿತಃ ಭಾಗ ೨ ಪು. ೫೭೪. ಅನುವಾದಕ ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ, ಶ್ರೀ ಪಂಚಾಚಾರ್ಯ ಪ್ರೆಸ್ ಮೈಸೂರು. (1963).

ಮಹಾತ್ಮ್ಯ ಇರುತ್ತದೆ. ಶೈವಾಗಮಗಳನ್ನು ಬಿಟ್ಟರೆ 'ಶರಣ' ಪದವನ್ನು ಹೇರಳ ವಾಗಿ ಪ್ರಯೋಗಿಸಿದ ಶಾಸ್ತ್ರವೆಂವರೆ ವಚನ ಸಾಹಿತ್ಯವು ಅಥವ ವಚನಾಗಮವು. ಇದು ಪ್ರಾದೇಶಿಕ ಭಾಷೆಯಲ್ಲಿಯ ಶಾಸ್ತ್ರ ಸಾಹಿತ್ಯ. ಪಾಲಿಭಾಷೆಯಲ್ಲಿ ಬೌದ್ಧರು ಕೂಡ ಈ ಪದವನ್ನು ಬಳಸಿದ್ದುಂಟು ಎಂದು ಸ್ಮರಣೆಗೆ ಬರುತ್ತದೆ. ಉಪನಿಷತ್ತು ಪ್ರತಿಪಾದಿಸಿದ ಅಶ್ರೌತ ಸಾಧನಗಳಲ್ಲಿ ಭಕ್ತಿ ಒಂದು ಎಂಬುದನ್ನು ಭಗವದ್ಗೀತೆಯು ಸಮರ್ಥಿಸುವದನ್ನು ನೋಡಬಹುದು.

ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।
ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥

ಭ. ಗೀ. XI. 53.

[Neither by the Vedas, nor by austerity, nor by gift, nor by sacrifice can be seen in this form as you have seen Me] ನನ್ನನ್ನು ಈ ರೂಪದಲ್ಲಿ ನಿನಗೆ (ಅರ್ಜುನನಿಗೆ) ನೋಡಲು ಸಾಧ್ಯವಾದುದು ವೇದದಿಂದಲ್ಲ, ತಪದಿಂದಲ್ಲ, ದಾನದಿಂದಲ್ಲ, ಯಜ್ಞದಿಂದಲ್ಲ ಎಂದು ಸ್ಪಷ್ಟ ಶಬ್ದ ಗಳಲ್ಲಿ ತಿಳಿಸಿ ೫೬ ಹಾಗಾದರೆ ಯಾವುದರಿಂದ ಅರ್ಜುನನು ನೋಡಲು ಸಾಧ್ಯ ವಾಯಿತು ಎಂಬುದನ್ನು ಗೀತೆಯೇ ಹೇಳುತ್ತದೆ.

ಭಕ್ತ್ಯಾತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥

ಭ. ಗೀ XI. 54.

[But by unswerving devotion can I, of this form, be known and seen in reality and also entered into, O scorcher of foes ].

ಉಪನಿಷತ್ತುಗಳ ಭಕ್ತಿಯು ಅಶ್ರೌತ ಸಾಧನೆಗಳಲ್ಲಿ ಒಂದೆಂಬವಾದವನ್ನು ಭಗವದ್ಗೀತೆಯು ಅತ್ಯಂತ ಸ್ಪಷ್ಟ ಶಬ್ದಗಳಲ್ಲಿ ತಿಳಿಸುವ ಮೂಲಕ ಪ್ರಸ್ತುತ

---

೫೬. ನೋಡಿ– ನ.... ಸ್ತಪಸಾ ಕರ್ಮಣಾ ವಾ।.... ಮು. ಉ. ರಾಮಕೃಷ್ಣಾ- ಶ್ರಮ [ತಪದಿಂದಾಗಲಿ, ಕರ್ಮದಿಂದಾಗಲಿ (ಗ್ರಹಿಸಲಾಗುವದಿಲ್ಲ) ]. ತಪ ಎಂಬ ಶಬ್ದ ವನ್ನು ವೈದಿಕ ಅರ್ಥದಲ್ಲಿ ಈ ಉಪನಿಷತ್ತು ತಿರಸ್ಕರಿಸಿದೆ. ಇದೇ ವಿಚಾರವಾದ ಸಮರ್ಥನೆಗೆ ತೈತ್ತಿರೀಯ ಉಪನಿಷತ್ತು, ಅನುವಾಕ ಒಂಭತ್ತು–ತಪಶ್ಚ ಎಂಬುದಕ್ಕೆ ಅಡಿ ಟಿಪ್ಪಣಿ ಕೃಚ್ಛ್ರವೇ ಮೊದಲಾದ ದೇಹದಂಡನೆಯ ವ್ರತಗಳೆಂದು ತಿಳಿಸುತ್ತದೆ. ರಾಮಕೃಷ್ಣಾಶ್ರಮ ಮೈಸೂರು (೧೯೭೬)

ಪ್ರಬಂಧದ ವಿಚಾರವಾದವನ್ನು ಸಮರ್ಥಿಸುತ್ತದೆ. ಈ ರೀತಿ ತಿಳಿಸಿದ ಇನ್ನೊಬ್ಬ ಸ್ವತಂತ್ರ ಮತ್ತು ಸ್ಪಷ್ಟ ವಿಚಾರವಾದಿಯೆಂದರೆ ಮಹಾತ್ಮಾ ಬಸವಣ್ಣನವರು. ಅವರ ಒಂದು ವಚನವು ಹೀಗೆ ತಿಳಿಸುತ್ತದೆ ;

"ವೇದ ನಡು ನಡುಗಿತ್ತು........ನಮ್ಮ ಕೂಡಲಸಂಗಯ್ಯನು
ಚೆನ್ನಯ್ಯನ ಮನೆಯಲುಂಡು ಕಾರಣ". [೫೭]

ವರ್ಣಾಶ್ರಮ ಬೋಧಿಸುವ ವೇದವು ಅಂತ್ಯಜನಿಗೆ ಅದನ್ನು ಓದುವ ಹಕ್ಕು ಇಲ್ಲ ಮತ್ತು ಮುಕ್ತಿ ಇಲ್ಲ ಎಂದು ಹೇಳಿದ ಮಾತಿಗೆ ವ್ಯತಿರಿಕ್ತವಾಗಿನಡೆದುದನ್ನು ತೋರಿಸಿ, ಭಕ್ತಿಯೆಂಬ ಸಾಧನವು ಇದನ್ನು ಸಿದ್ಧಿಸಿಕೊಟ್ಟಿದೆಂಬುದನ್ನು ತಿಳಿಸುವದೇ ಈ ವಚನದ ಆಶಯ. ಆದ್ದರಿಂದ ಇದು ಅಶ್ರೌತ ಸಾಧನ. ಅವರು ತಮ್ಮ ಇನ್ನೊಂದು ವಚನದಲ್ಲಿ ವೇದದಂತೆ ಆಗಮ ಪ್ರಕಾರಗಳಲ್ಲಿ ಒಂದಾದ ಶ್ರೌತಾಗಮವು ವರ್ಣಾಶ್ರಮ ಧರ್ಮದ ವಿಧಿಯನ್ನು ಅನುಸರಿಸಿದುದನ್ನು ಖಂಡಿಸಿದ್ದು ಇಂತಿದೆ—

"ಆಗಮದ ಹಲ್ಲ ಕಳೆಯಿತ್ತು ಕೂಡಲಸಂಗಯ್ಯನ ಭಕ್ತಿ ಗಜ ಹೋ !''[೫೮]
ಉಪನಿಷತ್ತು ಮತ್ತು ಭಗವದ್ಗೀತೆಗಳಿಗಿಂತ ಉಗ್ರವಾದರೀತಿಯಲ್ಲಿ ಬಸವಣ್ಣನವರು ಶ್ರೌತ ಪ್ರಣಾಲಿಯನ್ನು ಖಂಡಿಸಿ, ಅಶ್ರೌತ ಪ್ರಣಾಲಿಯನ್ನು ಎತ್ತಿಹಿಡಿದಿದ್ದಾರೆ. ಈ ಎಲ್ಲ ವಿವರಣೆ ಭಕ್ತಿಯು ಅಶ್ರೌತ ಸಾಧನವೆಂದು ಉಪನಿಷತ್ತುಗಳ ಕಾಲದಿಂದ ಬಸವಣ್ಣನವರ ಮೊದಲಾದ ಭಕ್ತಿ ಪಂಥದವರುಗಳವರೆಗೆ ಪ್ರತಿಪಾದಿಸುತ್ತಲೇ ಬಂದುದು ಗೊತ್ತಾಗುತ್ತದೆ.

## IV ಆಗಮಗಳ ಮತ್ತು ಶ್ರುತಿಗಳ ಸಂಬಂಧ

ಸನತ್ಕುಮಾರ ಸಂಹಿತೆಯನ್ನು, ಮತ್ತು ವಾಯವೀಯ ಸಂಹಿತೆಯನ್ನು ಉದ್ಧರಿಸಿ ವಿದ್ವಾಂಸರು ಆಗಮಗಳು ಶ್ರೌತ ಮತ್ತು ಅಶ್ರೌತವೆಂದು ಎರಡು ಪ್ರಕಾರದವು ಇರುತ್ತವೆ ಎಂದು ಗುರುತಿಸಿರುವುದನ್ನು ಆಗಲೆ ನೋಡಿಯಾಗಿದೆ. ಅದೇ ಸಮಯದಲ್ಲಿ ಶ್ರೌತ ಮತ್ತು ಅಶ್ರೌತ ಪದಗಳ ಅರ್ಥವೇನೆಂಬುದನ್ನೂ ಅರಿತುಕೊಳ್ಳಲಾಗಿದೆ. ಈಗ ಶ್ರೌತ ಆಗಮ, ಮತ್ತು ಸ್ವತಂತ್ರ ಅಥವ ಅಶ್ರೌತ ಆಗಮಗಳು

---

೫೭. ಎಸ್. ಎಸ್. ಬಸವನಾಳ (ಸಂ) ಬಸವಣ್ಣನವರ ವಚನಗಳು. ವ. ೭೯೯ ಎಲ್. ಇ. ಅಸೋಸಿಯೇಶನ್. ಧಾರವಾಡ (೧೯೬೨)

೫೮. ಎಸ್. ಎಸ್ ಬಸವನಾಳ (ಸಂ) ಅದೇ, ವ. ೭೪೮. ಎಲ್. ಇ ಅಸೋಸಿಯೇಶನ್, ಧಾರವಾಡ (೧೯೬೨)

ಅಂದರೆ ಏನು ಎಂಬುದನ್ನು ತಿಳಿದುಕೊಳ್ಳುವದೂ ಮತ್ತು ಅವುಗಳ ವಸ್ತುವನ್ನು ಕುರಿತು ಚಿಂತನ ಮಾಡುವದೂ ನಮ್ಮ ಮುಂದಿರುವ ಕಾರ್ಯವಾಗಿದೆ. ಈ ಕಾರ್ಯವನ್ನು ಕೈಗೆತ್ತಿಕೊಳ್ಳುವ ಪೂರ್ವಸಿದ್ಧತೆಯೆಂದು ಶ್ರುತಿಗಳಿಗೂ, ಆಗಮಗಳಿಗೂ ಇರುವ ಸಂಬಂಧವನ್ನು ಗುರುತಿಸುವಾ.

ಆಗಮ ಮತ್ತು ಶ್ರುತಿ ಇವುಗಳಿಗಿರುವ ಸಂಬಂಧವನ್ನು ಅನೇಕ ದೃಷ್ಟಯಿಂದ ನೋಡುವಾ. ಇವುಗಳಲ್ಲಿ ಎರಡು ದೃಷ್ಟಯಿಂದ ನೋಡುವುದು ಮುಖ್ಯವೆಂದು ಕಾಣುತ್ತದೆ. ಒಂದು ಕರ್ತೃ ದೃಷ್ಟಿ, ಇನ್ನೊಂದು ವಸ್ತು ಅಥವ ವಿಷಯ ದೃಷ್ಟಿ.

**ವೇದಾಗಮಗಳ ಕರ್ತೃ ಸಂಬಂಧ**

ಆಗಮಗಳ ಕರ್ತೃ ಮತ್ತು ಶ್ರುತಿಗಳ ಕರ್ತೃ ಒಬ್ಬನೇ ಇರುವನೋ, ಬೇರೆ ಬೇರೆ ಇರುವರೋ ಎಂಬುದು ಇಲ್ಲಿ ಪರಾಮರ್ಶಿಸಬೇಕಾದ ವಿಚಾರ. ಒಬ್ಬನೇ ಇದ್ದರೆ ಎರಡು ಶ್ರುತಿಗಳನ್ನು ಅಂದರೆ ಆಗಮಶ್ರುತಿ ಮತ್ತು ವೇದಶ್ರುತಿಗಳನ್ನು ಹೇಳುವದರ ವೈಶಿಷ್ಟ್ಯವೇನು ? ಎಂಬ ಪ್ರಶ್ನೆಯನ್ನು ಬಿಡಿಸಬೇಕು. ಇಲ್ಲವಾದಲ್ಲಿ ಅವೆರಡರ ಕಾರ್ಯಗಳೇನು ? ಎಂಬ ಸಮಸ್ಸೆಗೆ ಉತ್ತರ ವಿದೆಯೆ ? ಎಂಬುದನ್ನು ನೋಡಬೇಕು.

Like the Vedas the twenty eight Shaivagamas are believed to be a Revelation by all the shaivas......What is the purpose of a double Revelation? ಪ್ರಶ್ನೆಗೆ ಶೈವ ಸಿದ್ಧಾಂತದ ಪರಿಭಾಷಾ ಕರ್ತೃವು ಸರಿಯಾಗಿ ಉತ್ತರಿಸಿದ್ದಾನೆ ಎರಡು ಶ್ರುತಿಗಳೇಕೆಂಬುದನ್ನು ಕುರಿತು: ನ ಚೈವ ಮನಯೋರನ್ಯತರಸ್ಯ ವೈಥರ್ಥ್ಯಮ್। ಅತಿ ಗೂಡಾರ್ಥಸ್ಯವೇದಸ್ಯ ವಿರುದ್ಧ ನಾನಾವಾದಿಸಂಶಯಾಸ್ಪದತ್ವೇನ ತತ್ಪದಾರ್ಥ ವಿವರಣಪರಸ್ಯಾಗಮಸ್ಯ ಗುರೂ ಜನೋಪಯೋಗಿತ್ವಾತ್ । ಶ್ರೂಯತೇಹಿ "ವೇದಸಾರಃ ಶಿವಾಗಮ ಇತಿ" ವೇದದಲ್ಲಿ ಸೂತ್ರರೂಪದಲ್ಲಿ ಸ್ವಲ್ಪದರಲ್ಲಿ ಹೇಳಿದ್ದನ್ನು ಮತ್ತು ಅರ್ಥಗೌಪ್ಯ ವನ್ನು ವಿವರಿಸಿ ಜಿಜ್ಞಾಸುಗಳ ಅನುಕೂಲಕ್ಕಾಗಿ ಆಗಮಗಳನ್ನು ರಚಿಸಬೇಕಾಯಿತು.

ಶ್ರೀ ಶಂಭುಲಿಂಗ ಶಿವಾಚಾರ್ಯರೆಂಬ ನಿಗಮಾಗಮ ವಿಶಾರದರು ಅಶ್ವಲಾಯ ನನು ಹೇಳಲಾದ ಧರ್ಮಶಾಸ್ತ್ರವನ್ನು ವೇದದ ಕರ್ತೃತ್ವ ವಿಚಾರದಲ್ಲಿ ಉದ್ಧರಿಸಿ ವೇದವನ್ನು ಶಿವನು ಹೇಳಿದನು ಎಂದು ತೋರಿಸುವುದು ಇಂತು ಇದೆ– "ಅಶ್ವ ಲಾಯನ ಪ್ರಣೀತ ಧರ್ಮಶಾಸ್ತ್ರದ ೭ನೆಯ ಅಧ್ಯಾಯದಲ್ಲಿ,

ತಾವಲ್ಲೋಕಾಸ್ತ್ರಯೋ ವೇದಶಾಸ್ತ್ರಯೋ
ದೇವಾಸ್ತ್ರಯೋಽಗ್ನಯಃ । ಶಿವ ಸೃಷ್ಟಾಃ ॥

ಎಂದು ಶಿವನಿಂದ ವೇದಗಳು ಹುಟ್ಟಿರುವವೆಂಬ ಅಭಿಪ್ರಾಯವು ತೋರಿಸಲ್ಪಟ್ಟಿದೆ." ಎಂದು ಆಗಮ ಪರಿಜ್ಞಾನವೆಂಬ ಗ್ರಂಥದ ೧೯ನೆಯ ಪುಟದಲ್ಲಿ ಬರೆಯುತ್ತಾರೆ. ಬೃಹದಾರಣ್ಯಕ ಉಪನಿಷತ್ತು ವೇದ ಸೃಷ್ಟಿಯನ್ನು ಕುರಿತು ಹೀಗೆ ಹೇಳುತ್ತದೆ–

....ಅಸ್ಯ ಮಹತೋ ಭೂತಸ್ಯ ಋಗ್ವೇದ ಃ....

ಬೃ. ಉ. II. 4.10.,2.1.10;

[O Maitreyi, has been breathed forth from this great Being what we have as Rgveda, Yajurveda, Samaveda, Atharvingirasa........from him alone all these were breathed forth. [ಇಲ್ಲಿ ತಿಳಿಸಲಾದ ಆ ಮಹತ್ತಾದ ಭೂತವು ಯಾವದು ಅದು ವೇದವನ್ನು ಹೇಳಿದಂಥದು ? ಎಂಬ ಪ್ರಶ್ನೆಗೆ ಶ್ವೇತಾಶ್ವತರೋಪನಿಷತ್ತು ಉತ್ತರಿಸುವದನ್ನು ನೋಡ ಬಹುದು ಃ

ಯೋ ದೇವಾನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಪೋ
ರುದ್ರೋ ಮಹರ್ಷಿಃ ।
ಹಿರಣ್ಯ ಗರ್ಭಂ ಜನಯಾ ಮಾಸ ಪೂರ್ವಂ ಸ ನೋ
ಬುದ್ಧ್ಯಾ ಶುಭಯಾಸಂಯುನಕ್ತು ।। ಶ್ವೇ. ಉ. ೩. ೪.

[ ಇಂದ್ರಾದಿ ದೇವತೆಗಳ ಉತ್ಪತ್ತಿಗೆ ಮತ್ತು ಅವರ ವಿಭೂತಿಯೋಗಕ್ಕೆ ಕಾರಣನೂ ವಿಶ್ವಪಾಲಕನೂ, ಸೃಷ್ಟಿಗೆ ಮೊದಲು ಹಿರಣ್ಯಗರ್ಭನಿಗೆ ಜನ್ಮವನ್ನು ಕೊಟ್ಟವನೂ ಆದ ಆ ರುದ್ರನು ನಮಗೆ ಶುಭ ಬುದ್ಧಿಯನ್ನು ಕೊಡಲಿ ! ] ರುದ್ರನು ಹಿರಣ್ಯ ಗರ್ಭ ನನ್ನು ಎಲ್ಲಕ್ಕೂ ಮೊದಲು ಸೃಷ್ಟಿಮಾಡಿದನು ಎಂಬುದನ್ನು ಹೇಳಿದಂತೆ, ಇದೇ ಉಪನಿಷತ್ತಿನ ಇನ್ನೊಂದು ಮಂತ್ರವು ಹೀಗೆ ಸೃಷ್ಟಿಸಿದ ಹಿರಣ್ಯಗರ್ಭನಿಗೆ ವೇದವನ್ನು ಕೂಡ ಹೇಳಿದನೆಂಬುದನ್ನು ತಿಳಿಸುವದು. ಆ ಮಂತ್ರವು ಹೀಗೆ ಇರುತ್ತದೆ.

ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ
ವೇದಾಂಶ್ಚ ಪ್ರಹಿಣೋತಿ ತಸ್ಮೈ ।
ತಂ ಹ ದೇವಾತ್ಮಬುದ್ಧಿಪ್ರಕಾಶಂ ಮುಮುಕ್ಷುರ್ವೈ
ಶರಣಮಹಂ ಪ್ರಪದ್ಯೇ ॥ ಶ್ವೇ. ಉ. ೬. ೧೮.

[ಯಾವನು ಸೃಷ್ಟಿಗೆ ಮೊದಲು ಬ್ರಹ್ಮನನ್ನು (ಹಿರಣ್ಯ ಗರ್ಭನನ್ನು) ಉತ್ಪನ್ನ ಮಾಡಿದನೊ ಮತ್ತು ಅವನಿಗೆ ವೇದಗಳನ್ನು ಪ್ರಕಾಶಪಡಿಸಿದನೊ ಅಂಥ ಆತ್ಮ ಬುದ್ಧಿ ಪ್ರಕಾಶನಾದ ದೇವನನ್ನು ಮುಮುಕ್ಷುವೇ ಆಗಿರುವ ನಾನು ಶರಣು

ಹೊಂದುತ್ತೇನೆ. ] ಹೀಗೆ ರುದ್ರನಿಂದ ವೇದವನ್ನು ಪಡೆದುಕೊಂಡ ಪ್ರಜಾಪತಿಯು (ಹಿರಣ್ಯಗರ್ಭನು) ಸೃಷ್ಟಿಯ ಪ್ರಾರಂಭದಲ್ಲಿ ವೇದ ಶಬ್ದಗಳನ್ನುಚ್ಚರಿಸಿ ಅವುಗಳಿಗೆ ವಾಚ್ಯವಾದ ಅರ್ಥಗಳ ಆಕೃತಿಗಳನ್ನು ಸ್ಮರಿಸಿಕೊಂಡು ಹಿಂದಿನ ಕಲ್ಪದಂತೆಯೇ ಸೃಷ್ಟಿಯನ್ನು ಮಾಡಿದನು ಎಂಬುದನ್ನು ಋಗ್ವೇದವು[೫೯] ಕೂಡ ತಿಳಿಸುತ್ತದೆ. ಹೀಗೆ ವೇದೋಪನಿಷತ್ತುಗಳು ವೇದದ ಕರ್ತೃವು ರುದ್ರನು ಎಂದು ತಿಳಿಸುತ್ತವೆ.

ಈ ರುದ್ರನೇ ಆಗಮಗಳ ಕರ್ತೃ ಎಂದು ಶಿವಾಗಮಗಳು, ಭಾಷ್ಯಗಳು, ಆಗಮ ವಿಶಾರದರು ತಿಳಿಸುವರು. ಸಿದ್ದರಾಮಪ್ಪ ಪಾವಟೆಯವರು ಈ ಬಗ್ಗೆ ಹೀಗೆ ಬರೆಯುತ್ತಾರೆ. Like the Vedas the twenty-eight Shaivagamas are believed to be revelation by all the Shivas, The Vedas are believed to be the breath (ಶ್ವಾಸ) of the supreme deity, and the Agamas, His clear utterance. The Vedas derive their authority, because they are the work of the Supreme Deity. [೬೦] ಶ್ರೀಪತಿ ಪಂಡಿತಾರಾಧ್ಯರು ಶ್ರೀಕರ ಭಾಷ್ಯದ ಸರ್ವತ್ರ ಪ್ರಸಿದ್ಧ್ಯಧಿಕರಣದಲ್ಲಿ "ವೇದ-ಆಗಮಗಳೆರಡಕ್ಕೂ ಶಿವನೊಬ್ಬನೆ ಕರ್ತೃವಾಗಿರುನೆಂದು ತಿಳಿಸಿದ್ದುಂಟು." ಶ್ರೀಕಂಠ (ನೀಲಕಂಠ) ಶಿವಾಚಾರ್ಯರು "ವಯಂ ತು ವೇದಾಗಮಯೋಃ ಭೇದಂ ನ ಪಶ್ಯಾಮಃ" ಎಂದು ಹೇಳುವ ಮಾತಿವಲ್ಲಿ ಕರ್ತೃ ಒಬ್ಬನಿಂದ ಸೃಷ್ಟಿಗೊಂಡವು ಎಂಬುದರಲ್ಲಿ ಏಕ ಕರ್ತೃ ವಿಚಾರ ಸೂಚನೆ ಇರುತ್ತದೆ. ಕಾಮಿಕಾಗಮವು[೬೧] ಆಗಮದ ಕರ್ತೃವಿಚಾರವನ್ನು ಹೀಗೆ ತಿಳಿಸುತ್ತದೆ-

ಶಿವೋದ್ಗೀರ್ಣಮಿದಂ ಜ್ಞಾನಂ ಮಂತ್ರ ಮಂತ್ರೇಶ್ವರೇಶ್ವರೈಃ ।
ಕಾಮದತ್ವಾತ ಕಾಮಿಕೇತಿ ಪ್ರಣೀತಂ ಬಹು ವಿಸ್ತರ ॥

[ಪರಶಿವನಿಂದ ಹೊರ ಹೊಮ್ಮಿದ ಜ್ಞಾನವನ್ನು ಮಂತ್ರ ಮಂತ್ರೇಶ್ವರ ಮತ್ತು ಈಶ್ವರರು ಕಾಮದ ಎಂದರೆ ಇಷ್ಟವನ್ನು ಕೊಡುವದರಿಂದ ಕಾಮಿಕವೆಂದು ಕರೆದರು.] ಇಲ್ಲಿ ತಿಳಿಸಿದಂತೆ ಪರಶಿವನಿಂದುಕ್ತವಾದ ಜ್ಞಾನವೇ ಆಗಮ. ಆದ್ದರಿಂದ ಶಿವನೇ ಆಗಮ ಶಾಸ್ತ್ರದ ಕರ್ತೃ ಆಗಿರುತ್ತಾನೆ. ಶ್ರೀ ಶ್ರೀಯದುಗಿರಿ ಯತಿರಾಜ ಸಂಪತ್ಕುಮಾರ[೬೨] ರಾಮಾನುಜ ಜೀಯರ್ ಅವರು ಹೀಗೆ ಬರೆಯುತ್ತಾರೆ-

---

೫೯ ಋಗ್ವೇದ IX. 3. 67.

೬೦. Siddharamappa Dundappa Pavate. Veerashaiva Philosophy of the Shaivagamas, Preface. Hubli (1927),

೬೧. ಕಾಮಿಕಾಗಮವನ್ನು ಪಂಚಯಿಸಲುದ್ಧರಿಸಿದವರು ಜಿ.ಎಂ. ಸಂಜುಂಡಾರಾಧ್ಯರು. ಗ್ರಂಥ ಶಿವಾಗಮ ಸೌರಭ ಪು. ೩೪ ಶ್ರೀ ಜಚನಿ ಅಧ್ಯಯನ ಪೀಠ, ಬೆಂಗಳೂರು.

೬೨. ಶಿವಾಗಮ ಸೌರಭ, ಪು. ೩೩, (48)

"ಕಲಿಯುಗದಲ್ಲಿ.... ಅನೇಕ ಧರ್ಮಶಾಸ್ತ್ರಗಳನ್ನು ಬರೆದರು.

ಪರಾಶರ ಸ್ಮೃತಿಯ ವಾಕ್ಯದಂತೆ "ಕಲೌ ಪಂಚ ವಿವರ್ಜಯೇತ್" ಎಂಬ ವಿಧಿಯನ್ನನುಸರಿಸಿ ಯಜ್ಞಯಾಗಾದಿಗಳು ನಿಲ್ಲಿಸಲ್ಪಟ್ಟು 'ಕಲೌವಾಗಮ ಸಮ್ಮತಃ' ಎಂಬ ಪ್ರಮಾಣ ರೀತ್ಯಾ ಆಗಮ ಶಾಸ್ತ್ರಗಳ ಪ್ರಕಾರ ಭಗವತ್ಪೂಜಾ ವಿಧಾನವನ್ನು ತಿಳಿಸುವ ಸಲುವಾಗಿ ಪರಶಿವನು ಶೈವಾಗಮ ಶಾಸ್ತ್ರವನ್ನು ವಿಧಿಸಿದನು." ರಂಗನಾಥ ದಿವಾಕರರು[೬೩] ವಚನ ಶಾಸ್ತ್ರರಹಸ್ಯ ಎಂಬ ಗ್ರಂಥದಲ್ಲಿ ಶೈವಾಗಮಗಳೆಂದರೆ ಶಿವೋಕ್ತ ಆಗಮಗಳು ಎಂದು ತಿಳಿಸಿ ಶಿವನೇ ಆಗಮಶಾಸ್ತ್ರ ಕರ್ತೃ ಎನ್ನುವರು; The Tantra first communicated by Shiva, came down through tradition. It is Agama with the characteristics of chandas (veda)."[೬೪] ಎಂದು ಬರೆಯುವ ಮೂಲಕ ಆಗಮ ಮತ್ತು ವೇದಗಳ ಸಂಬಂಧವನ್ನು ತಿಳಿಸಿದರು ಪಿ. ಸಿ. ಭಗಚಿ. ಶಿವಾಗಮ ಕರ್ತನನ್ನು ಮತ್ತು ಅದರಲ್ಲಿ ಬರುವ ತಾತ್ವಿಕ ವಿಷಯವನ್ನು ಹಾಗೂ ಯಾರು ಜ್ಞಾನಕ್ಕಧಿಕಾರಿ ಎಂಬುದನ್ನು "ಶಿವ ಪುರಾಣದ ವಾಯುವೀಯದಲ್ಲಿ-

ಉಪಮನ್ಯು : ಶ್ರೀ ಕಂಠೇನ ಶಿವೇನೋಕ್ತಃ ಶಿವಾಯೈ ಚ ಶಿವಾಗಮಃ
ಶಿವಾಶ್ರಿತಾನಾಂ ಕಾರುಣ್ಯಾಚ್ಛ್ರೇಯಸಾಮೇಕ ಸಾಧನಂ ॥

ನೀಲಕಂಠ ಪರಮಾತ್ಮನಿಂದ ಪಾರ್ವತಿಗೆ ಶಿವಾಗಮವು ಹೇಳಲ್ಪಟ್ಟಿತು. ಪರಮಾತ್ಮನಿದನ್ನು ತನ್ನನ್ನಾಶ್ರಯಿಸಿದ ಭಕ್ತರ ಕಾರುಣ್ಯದಿಂದ ಹೇಳಿರುವನು. ಅದು ಅವರ ಮುಕ್ತಿಗೆ ಒಂದೇ ಒಂದು ಸಾಧನವಾಗಿದೆ.

ಕೃಷ್ಣ :- ಭಗವಾನ್ ಶ್ರೋತುಮಿಚ್ಛಾಮಿ ಶಿವೇನ ಪರಿಭಾಷಿತಂ ।
ವೇದಸಾರಂ ಶಿವಜ್ಞಾನಂ ಸ್ವಾಶ್ರಿತಾನಾಂ ವಿಮುಕ್ತಯೇ ॥
ಅಭಕ್ತಾನಾಮಬುದ್ಧಾನಾಮ ಯುಕ್ತಾನಾಂ ಅಗೋಚರಂ ।
ಅರ್ಥೈರ್ದಶಾರ್ಥೈಃ ಸಂಯುಕ್ತಂ ಗೂಢಮಪ್ರಜ್ಞನಿಂದಿತಂ ॥

ತನ್ನನಾಶ್ರಯಿಸಿದವರ ಮುಕ್ತಿಗಾಗಿ ಶಿವನಿಂದ ಹೇಳಲ್ಪಟ್ಟ ವೇದಸಾರವಾದ ಶಿವ ಜ್ಞಾನವನ್ನು ಕೇಳಲಿಕ್ಕೆ, ಪೂಜ್ಯನೇ ! ಬಯಸುತ್ತೇನೆ. ಅದು ಶಿವಭಕ್ತ ಹೀನರಿಗೂ, ಬುದ್ಧಿಶೂನ್ಯರಿಗೂ, ಶಿವಯೋಗರಹಿತರಿಗೂ, ಗೋಚರಿಸದು— ಅದರಲ್ಲಿ ಪತಿ, ಪಶು, ಪಾಶ ಮುಂತಾದ ಪದಾರ್ಥಗಳ ವಿವೇಚನೆಯುಂಟು. ಗೂಢವಾದುದು

---

೬೩. ರಂ. ರಾ. ದಿವಾಕರ, ವಚನ ಶಾಸ್ತ್ರ ರಹಸ್ಯ, ಪು. ೧೭. ಮೂರು ಸಾವಿರಮಠ ಹುಬ್ಬಳ್ಳಿ (೧೯೬೮)

೬೪. The Journal of Karnatak University Vol. VI June P.2. 1962.

ಮಂದರಿಂದ ನಿಂದಿತವಾದುದು." ಎಂದು ವಿವರವಾಗಿ ಪ್ರತಿಪಾದಿತವಾಗಿರುತ್ತದೆ. ಕಾರಣಾಗಮವು ವೇದ ಮತ್ತು ಆಗಮಗಳನ್ನು ಕುರಿತು ಹೀಗೆ ತಿಳಿಸುತ್ತದೆ—

ವಾಚನೀಯಮಿದಂ ದೇವಿ ಪುಣ್ಯಾಹಂ ಮಂಗಲ ಪ್ರದಮ್ ।
ಯಜುರ್ಮಧ್ಯ ಸಮುತ್ಪನ್ನಂ ಕಾರಣಾಗಮ ಸೂತ್ರಜಮ್ ॥೬॥

ವೀರಶೈವ ಸದಾಚಾರ ಸಂಗ್ರಹ

[ಎಲೈ ಪಾರ್ವತಿಯೆ, ಮಂಗಲಕರವಾದ ಯಜುರ್ವೇದದಲ್ಲಿ ಉತ್ಪನ್ನವಾದ ಕಾರಣಾಗಮದಲ್ಲಿ ಪ್ರಕಟಿತವಾದ ಈ ಪುಣ್ಯಾಹವು ಹೇಳಲ್ಪಡುವುದು.] ವೇದಾಗಮಗಳ ಸಂಬಂಧವು ಎಷ್ಟು ನಿಕಟವೆಂಬುದನಿಲ್ಲಿ ತೋರಿಸಲಾಗಿದೆ. ಡಾ. ಎಸ್. ಸಿ. ನಂದಿಮಠರು ಆಗಮಗಳನ್ನು ಕುರಿತು ಬರೆಯುತ್ತ On the other hand, Saivagamas assert quite clearly that Siva revealed them to Parwati or some one else. ಶಿವನು ಶೈವಾಗಮಗಳನ್ನು ಬರೆದಿರುವುದನ್ನು, ಆದೇ ರೀತಿ ವೇದಗಳನ್ನು ಶಿವನು ಬರೆದಿರುವುದನ್ನು ತಿಳಿಸುವ ಮಾತುಗಳು ವೇದಾಗಮಗಳ ಕರ್ತೃವು ಒಬ್ಬನೇ ಎಂಬುದನ್ನು ಸಮರ್ಥಿಸುವವು.

## ವೇದಾಗಮಗಮಗಳ ವೈಷಯಿಕ ಸಂಬಂಧ

ಇಲ್ಲಿಯವರೆಗೆ ಶ್ರುತಿಗಳ ಮತ್ತು ಆಗಮಗಳ ಸಂಬಂಧವನ್ನು ಅವುಗಳ ಕರ್ತೃದೃಷ್ಟಿಯಿಂದ ನೋಡಲಾಯಿತು. ಈಗ ಅವುಗಳಲ್ಲಿರುವ ವಿಷಯಗಳಿಂದ ಅವೆರಡೂ ಶ್ರುತಿಗಳ ಸಂಬಂಧವನ್ನು ನೋಡಬಹುದು.

(೧) ತಂತ್ರವೆಂದು ಹೆಸರು ಆಗಮಗಳಿಗಿದೆ. ತಂತ್ರವೆಂದು ಹೆಸರಿಸಿದಾಗ ಆಗಮಗಳೆಂದೇ ಅರ್ಥ. ಆಗಮ ಅಥವ ತಂತ್ರದ ಸಂಬಂಧವನ್ನು ಗುರುತಿಸಿದ್ದು ಇಂತಿದೆ- "Tantra is regarded as a Sruti or Agama, 'revelation,' as opposed to Smriti or Nigama, 'tradition. It is thus classed with the Vedas. It is usually defined as 'Sruti sakhavisesah,' a particular branch of Vedas." ಆಗಮವು ವೇದಗಳ ವಿಶಿಷ್ಟ ಶಾಖೆಗೆ ಸೇರಿದೆ ಎಂಬುದು ಇಲ್ಲಿಯ ಅಭಿಪ್ರಾಯ, ಹಾಗೂ ಅದರಲ್ಲೂ ಉಪನಿಷದ್ವಿದ್ಯೆಯ ಫಲವೆಂದೂ ತಿಳಿಸುವದನ್ನು ನೋಡಬೇಕು- One of the oldest Tantras available in manuscript, Nisvasatattva Samhita, holds that the Tantra is the culmination of the esoteric science of the Vedanta and

the Sankhya. In fact, it combines with the ultimate reality of Brahman or Siva, the validity of the world as an expression of His Sakti...... 'The Tantra, first communicated by Siva, came down through tradition. It was Agamas with the characteristics of **chandas** (Vedas).[೬೫] ವರ್ಣಾಶ್ರಮಧರ್ಮದ ಅಥವ ವೇದಕರ್ಮದ ಖಂಡನೆಮಾಡುವ ಉಪನಿಷತ್ತುಗಳ ವಿದ್ಯೆಯನ್ನು ಅನುಸರಿಸಿ, ವಿಸ್ತರಿಸಿಕೊಂಡು ಬಂದ ಆಗಮಗಳ ವಿಚಾರವು ಇಲ್ಲಿ ಇರುವುದು; ಮತ್ತು 'ಶ್ರುತಿಶಾಖಾ ವಿಶೇಷ'ವೆಂದು ತಿಳಿಸಿರುವುದು. ಇವು ಅಶ್ರೌತ ಶಾಖೆಗೆ ಸೇರಿದ ಉಪನಿಷತ್ತುಗಳನ್ನೇ ಅನುಸರಿಸಿವೆ ಎಂದು ಅರ್ಥವಾಗುತ್ತದೆ. ಇವಲ್ಲದೆ ವೇದಚ್ಛಂದ ಹಾಗೂ ವೈದಿಕ ವರ್ಣಧರ್ಮ ಮತ್ತು ಜ್ಯೋತಿಷ್ಟೋಮಾದಿ ಕರ್ಮಗಳ ಪ್ರತಿಪಾದನೆ ಆಗಮಗಳಲ್ಲಿ ಇರುವ ವಿಷಯವನ್ನು ಇದೇ ಲೇಖದಲ್ಲಿ ತಿಳಿಸಲಾಗಿದೆ. ಇದು ಶ್ರೌತಾಗಮ ಶಾಖೆಯ ವಿಚಾರವಾಗಿದೆ. ಹೀಗೆ ಈ ಪ್ರಬಂಧದ [೬೬] ಲೇಖಕರ ಪ್ರಕಾರ ವೇದ ಮತ್ತು ಉಪನಿಷತ್ತುಗಳಿಗೆ ಆಗಮಗಳ ಸಂಬಂಧವು ವಿಷಯರೀತ್ಯಾ ಕೂಡ ಇರುತ್ತದೆ ಎಂಬುದು ಕಂಡು ಬರುತ್ತದೆ.

(೨) ಶ್ರೀಪತಿಪಂಡಿತಾರಾಧ್ಯರು ಅಗಸ್ತ್ಯ ದುರ್ವಾಸಾದಿಗಳು ಬ್ರಹ್ಮಸೂತ್ರವನ್ನು ಕುರಿತು ಬರೆದ ಕಾರಿಕಾದಿಗಳನ್ನು ಆಧರಿಸಿ ಬ್ರಹ್ಮಸೂತ್ರಗಳಿಗೆ ಶ್ರೀಕರಭಾಷ್ಯವನ್ನು ಬರೆದಿರುವರು. ಅವರು ಭಾಷ್ಯದಲ್ಲಿ

ತಸ್ಮಾದ್ ವೇದಾಗಮಾರ್ಥೇಷು ಯಃ ಕುರ್ಯಾದ್ ಭೇದ ಭಾವನಾಂ॥
ಸ ಸಹಸ್ರಕುಲಂ ಘೋರೇ ನರಕೇ ಪತತಿ ಧೃವಂ॥ (ಬ್ರ. ಸೂ. ಭಾಷ್ಯ)
೧. ೧. ೩

ಇವರ ಪ್ರಕಾರ ವೇದಾಗಮಗಳಲ್ಲಿ ಭೇದ ಭಾವನೆಯನ್ನು ತೋರಿದವರು ನರಕಕ್ಕೆ ಬೀಳುವರು. ಶ್ರೀಪತಿಪಂಡಿತಾರಾಧ್ಯರು ವೇದಾಗಮಗಳ ಸಂಬಂಧದ ವಿಚಾರವು ಸ್ಮೃತಿಗೆ ವಿರೋಧವಲ್ಲದುದು ಎಂಬುದನ್ನು ಪ್ರಸ್ತಾಪಿಸುವುದು ಕಂಡುಬರುತ್ತದೆ. ಆರಾಧ್ಯರು ಶ್ರೀಕರ ಭಾಷ್ಯದಲ್ಲಿ ಶಿವಾಗಮಗಳ ಚಾತುರ್ವರ್ಣವನ್ನು ಒಪ್ಪುವುದರ ಜೊತೆಗೆ ಯಜ್ಞೋಪವೀತ ಮತ್ತು ಇಷ್ಟಲಿಂಗದ ಧಾರಣವನ್ನು ತಿಳಿಸುವರು. ಇವರ

---

೬೫ The Cultural Heritage of India. Vol. IV. P 212. Ramakrishna Mission Calcutta (1975).

೬೬ The Cultural Heritage of India Vol. IV. P. 213-214. Ramakrishna Mission. (1975)

ಈ ವಿಚಾರವು ಶ್ರೌತಾಗಮ ವಿಚಾರವೆಂಬುದು ನಿಚ್ಚಳವಾಗಿರುತ್ತದೆ. ಕ್ರಿ. ಶ. ೯ನೆಯ ಶತಮಾನದವರೆಂದು ಪರಿಗಣಿಸಲಾದ ಶ್ರೀಕಂಠ ಶಿವಾಚಾರ್ಯರು ಒಬ್ಬ ಸುಪ್ರಸಿದ್ಧ ಬ್ರಹ್ಮಸೂತ್ರ ಭಾಷ್ಯಕಾರರು. ಇವರು ಆಂಧ್ರದವರೆಂದು ಗುರುತಿಸಲಾಗಿದೆ. ವೇದಾಗಮಗಳ ಸಂಬಂಧವನ್ನು ಕುರಿತು ಹೀಗೆ ಬರೆಯುತ್ತಾರೆ-

ವಯಂ ತು ವೇದಶಿವಾಗಮಯೋರ್ಭೇದಂ ನ ಪಶ್ಯಾಮಃ॥

ಬ್ರ. ಸೂ. ೨. ೨. ೩೮.

ವೇದಾಗಮಗಳಲ್ಲಿ ವ್ಯತ್ಯಾಸವೆಂಬುದನ್ನೇ ಕಾಣಲಾರೆವೆಂಬುದು ಇವರ ಅಭಿಪ್ರಾಯವಾಗಿದೆ. ಈ ಭಾಷ್ಯದ ಪ್ರಕಾರ ವೇದವೆಂದರೆ ಯಜ್ಞ ಯಾಗಾದಿಗಳಿಗೆ ಉಪಯೋಗಿಸುವ ಮತ್ತು ಅವುಗಳನ್ನು ಕುರಿತು ಶಾಸ್ತ್ರವಿಷಯ ತಿಳಿಸುವ ಮಂತ್ರ ಮತ್ತು ಬ್ರಾಹ್ಮಣಗಳಾಗಿವೆ. ಇವರು ವರ್ಣಾಶ್ರಮಗಳನ್ನು ಮತ್ತು ವರ್ಣಕರ್ಮಗಳನ್ನು ಮನ್ನಿಸುವವರು. ಶ್ರೀಕಂಠ ಶಿವಾಚಾರ್ಯರು ಸಹ ಶ್ರೀಪತಿಪಂಡಿತಾರಾಧ್ಯರಂತೆ ಶ್ರೌತಾಗಮಿಕರು. ಈ ಮಾತನ್ನು ಅವರ ಭಾಷ್ಯದಿಂದ ಸಮರ್ಥಿಸಬಹುದು. 'ಶೃಗಸ್ಯೇತ್ಯಾದಿ' ಸೂತ್ರಾರ್ಥ ವಿಚಾರ ಮಾಡುವಾಗ 'ಶೂದ್ರಾದೀನಾಂ ನಾಧಿಕಾರ ಇತಿ ಸಮ್ಯಕ್ ಸುನಿಶ್ಚಿತಃ' ಎಂದು ಶ್ರೀಕಂಠ ಶಿವಾಚಾರ್ಯರು ತಿಳಿಸುತ್ತಾರೆ. ಶ್ರೀಪತಿಪಂಡಿತಾರಾಧ್ಯರು ಕೂಡ 'ಶ್ಯುಗಸ್ಯ' ಎಂದು ಪ್ರಾರಂಭವಾಗುವ ಸೂತ್ರ ವಿಚಾರವನ್ನು ಕುರಿತು ಭಾಷ್ಯ ಬರೆಯುತ್ತ 'ನಶೂದ್ರಸ್ಯ ಬ್ರಹ್ಮ ವಿದ್ಯಾಧಿಕಾರಃ' ಎಂದು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ. ೬೭ ಸ್ಮೃತಿ ವಿರೋಧವಲ್ಲದ್ದು ವೀರಶೈವವು ಎಂಬ ಇವರ ಈ ವಿಚಾರವನ್ನು ಪುಷ್ಟೀಕರಿಸಲು ಕೊಡುವ ಆಧಾರಗಳನ್ನು ನೋಡಬಹುದು. ಅವು ಇಂತಿವೆ.

(೩) ಗೌತಮ ಸ್ಮೃತಿಯಲ್ಲಿ "ಮುಖೇ ಮಂತ್ರೋ ಹೃದಿಧ್ಯಾನಂ ಮಸ್ತಕೇ ಲಿಂಗ ಧಾರಣಂ। ರುದ್ರಾಕ್ಷಂ ಚ ಶಿಖಾ ಭಸ್ಮ ಇತಿ ಬ್ರಾಹ್ಮಣ ಲಕ್ಷಣಂ॥" ಮುಖದಲ್ಲಿ ಷಡಕ್ಷರ ಮಂತ್ರವೂ, ಹೃದಯದಲ್ಲಿ ಶಿವಧ್ಯಾನವೂ, ಮಸ್ತಕದಲ್ಲಿ ಲಿಂಗ ಧಾರಣವೂ, ರುದ್ರಾಕ್ಷವೂ ಶಿಖೆಯೂ ಭಸ್ಮವೂ ಇಂತಿದು ಬ್ರಾಹ್ಮಣ ಲಕ್ಷಣವು ಎಂದು, ಈ ಸ್ಮೃತಿಯು ಲಿಂಗಧಾರಿ ಬ್ರಾಹ್ಮಣನ ಆಚರಣೆಯನ್ನು ಕುರಿತು ತಿಳಿಸಿರುತ್ತದೆ. ಮನುಸ್ಮೃತಿಯಲ್ಲಿ–ಸರ್ವಕರ್ಮ ವಿಮುಕ್ತಸ್ಯ ಧ್ಯಾನಯೋಗ ರತಸ್ಯ ಚ ನ ತಸ್ಯ ದಹನಂ ಕಾರ್ಯಂ ನಚ ಪಿಂಡೋದಕ ಕ್ರಿಯಾ॥ ಶಿವಧ್ಯಾನ ರತೋಭೂತ್ವಾ ಶಿವಲಿಂಗಾಂಗ ಸಂಯುತಃ। ಶಿವೇತರ ಪರಿತ್ಯಾಗೀ ಧ್ಯಾನಯೋಗಿ ಸ ಉಚ್ಯತೇ॥ ಸರ್ವಕರ್ಮಗಳಿಂದ ವಿಮುಕ್ತನಾದ, ಧ್ಯಾನಯೋಗದಲ್ಲಿ ರತಿಯುಳ್ಳ ಮೃತನ

೬೭. ಟಿ, ಎನ್. ಮಲ್ಲಪ್ಪ, ಶ್ರೀಕಂಠ ಭಾಷ್ಯವು ವೀರಶೈವವೆ, ಪು ೧೮೦, ೧೮೧, ಬೆಂಗಳೂರು

ದಹನವು ಮಾಡಬೇಕಾದುದಿಲ್ಲ. ಅವನಿಗೆ ಪಿಂಡೋದಕ ಕ್ರಿಯೆಯು ಇಲ್ಲ. ಅಂಗದಲ್ಲಿ ಶಿವಲಿಂಗದಿಂದ ಯುಕ್ತನಾಗಿ ಶಿವಧ್ಯಾನದಲ್ಲಿ ಪ್ರೀತಿಯುಳ್ಳ ಶಿವನಿಂದನ್ಯವೆಲ್ಲವನ್ನು ಬಿಟ್ಟವನು ಧ್ಯಾನಯೋಗಿ ಎಂದೆನಿಸುವನು, ಎಂಬಿವೆ ಮೊದಲಾದ ಅನೇಕ ಪ್ರಮಾಣ ಗಳಿರುವುದರಿಂದ ಸ್ಮೃತಿಗಳಲ್ಲಿ ವೀರಶೈವವು ಕಂಡು ಬರುತ್ತದೆನ್ನಬಹುದು......ಈ ವಿಷಯದಲ್ಲಿ ಲಿಂಗಧಾರಣ ಚಂದ್ರಿಕಾಕಾರನ ಉಕ್ತಿಯು ಮನನೀಯವಾಗಿದೆ. ಆ ಗ್ರಂಥಕಾರನು ಗೌತಮ ಸ್ಮೃತಿಯಿಂದ "ಮುಖೇ ಮಂತ್ರೋ" ಮುಂತಾಗಿರುವ ಶ್ಲೋಕವನ್ನು ಲಿಂಗಧಾರಣವು ಸ್ಮೃತಿಸಮ್ಮತವೆಂದುದಾಹರಿಸಿ ಸಿದ್ಧಪಡಿಸಿರು ವನು."[೬೮] ಈ ಬರಹಗಳು ಸ್ಮೃತಿ ಹಾಗೂ ಆಗಮಧರ್ಮಗಳಿಗೆ ಇರುವ ಸಂಬಂಧವನ್ನು ತಿಳಿಸುತ್ತವೆ. ಈ ಮುಖಾಂತರ ಆಗಮ ಮತ್ತು ಸ್ಮೃತಿಯ ಸೃಷ್ಟಿಗೆ ಮೂಲವಾದ ಶ್ರುತಿಗಳಿಗೂ ಇರುವ ಸಂಬಂಧವನ್ನು ಗುರುತಿಸಬಹುದು. ಯಾಕಂದರೆ ಶ್ರುತಿ, ಸ್ಮೃತಿ ಹಾಗೂ ಇತಿಹಾಸಗಳಲ್ಲಿ ವೀರಶೈವವಿರುವುದೆಂದು ವೀರಶೈವಾಗಮ ವಿಶಾರ ದರು ತಿಳಿಸುತ್ತಾರೆ. ಈ ಆಗಮಧರ್ಮವು ಶ್ರೌತವೋ ಅಶ್ರೌತವೋ ಎಂಬುದು ಬೇರೆ ವಿಷಯ.

(೪) ಆಗಮಗಳು ವೇದವು ಹೇಳಿರುವುದನ್ನು ವಿವರ ವಿವರವಾಗಿ ತಿಳಿಸು ತ್ತವೆ. ಇದನ್ನು ಆಗಮ, ಮತ್ತು ಉಪನಿಷತ್‌ಗಳಲ್ಲಿರುವ ವಸ್ತು ವಿವೇಕದಿಂದ ತಿಳಿದುಕೊಳ್ಳಬಹುದು. As for sacrificial portion of the Vedas, the Agamas leave it alone, to be explained and expounded by the various Brahmanas, but deal exclusively with the Upasana and Jnanakanda of the Vedas. The various principles and elements that go to make up the Universe are but briefly stated in the Upanisads. But Shaivagamas deal with these elements at length and exhaustively ........A reference to Kamikagama would show that according to Agamas four castes exist by birth........so there was a opposition between the Smritis and Agamas, in regard to these Varnas and as to the accessibility of the sacred learning to the Shudras."[೬೯] ಈ ವಿವರಣೆಯು

---

೬೮. ಸಿದ್ಧರಾಮಪ್ಪ ದುಂಡಪ್ಪ ಪಾವಟೆ. ಶ್ರೀಮದಲ್ಲಮ ವ್ಯೋಮ, ಪು. ೩ ಹುಬ್ಬಳ್ಳಿ (೧೯೨೬).

೬೯. Siddharamappa Dundappa Pavate, Veerashaiva Philophy of the Shaivagamas. p.3: p 5. Hubli (1927)".

ಆಗಮಗಳಿಗೂ ಉಪನಿಷತ್ತೆಂಬ ಶ್ರುತಿಗೂ ಇರುವ ವೈಷಯಿಕ ಸಂಬಂಧವನ್ನು ತೋರಿಸುತ್ತದೆ. ಇಲ್ಲಿ ಸೃಷ್ಟಿಯವಸ್ತುವು ಇವುಗಳ ಸಂಬಂಧಗೊಳಿಸುವ ಕೊಂಡಿಯಾಗಿದೆ. ವೇದವೆಂಬ ಶ್ರುತಿಗೂ ಆಗಮಕ್ಕೂ ಇರುವ ಸಂಬಂಧವನ್ನು ಇಲ್ಲಿ ತೋರಿಸಲು ಆಗಮಗಳಲ್ಲಿ ವರ್ಣಕಲ್ಪನೆ ಇರುವದನ್ನು ಎತ್ತಿ ಹೇಳಲಾಗಿದೆ. ಅದೇ ರೀತಿ ವೇದಾಧ್ಯಯನದ ಅಧಿಕಾರವು ಶೂದ್ರನಿಗಿಲ್ಲ ಎಂಬುದು ಕೂಡ ಆಗಮ ಮತ್ತು ವೇದಕ್ಕೆ ಇರುವ ಸಂಬಂಧದ ಕಳಿಗೆಯಾಗಿದೆ.

(೫) ವೈದಿಕ ಮತ್ತು ಅವೈದಿಕ ಭೇದದ ವಿಚಾರ ಮಾಡಿದ ವಿದ್ವಾಂಸರು ಆಗಮಗಳ ವಿಷಯದಲ್ಲಿಯೂ ಮಾಡಿದ್ದಾರೆ. ವೈದಿಕ ಮತ್ತು ಅವೈದಿಕವೆಂದರೆ ಶ್ರೌತ ಮತ್ತು ಅಶ್ರೌತವೆಂಬುದೇ ಅರ್ಥ. ಅವೈದಿಕ ಶಬ್ದಕ್ಕೆ ಭಿನ್ನ ಭಿನ್ನವಾದ ಎರಡು ಅರ್ಥಚ್ಛಾಯೆಗಳಿರುವುದನ್ನು ಸಾಧಾರಪೂರ್ವಕವಾಗಿ ಈ ಮೊದಲು ತೋರಿಸಲಾಗಿರುವದು. 'ಅವೈದಿಕ' ಎಂಬ ಪರಿಚಿತಾರ್ಥವು ವಿದ್ವಾಂಸರನ್ನು ಕಾಡಿಸಿದೆ. ಆಗಮಗಳು ಅವೈದಿಕವೆಂದಾಗ ಕೆಲವು ವಿದ್ವಾಂಸರು ಆಗಮಗಳು 'ವೈದಿಕ'ವೆಂದು ಪ್ರಯತ್ನ ಮತ್ತು ಯುಕ್ತಿಪೂರ್ವಕ ತೋರಿಸಿದ್ದು ಉಂಟು. ಇದು ಕೂಡ ಆಗಮ ಮತ್ತು ವೇದಗಳಿಗಿರುವ ಸಂಬಂಧವನ್ನು ತಿಳಿಸುತ್ತದೆ, ಅವೈದಿಕವು ಉಪನಿಷತ್ತುಗಳಿಗೂ ಆಗಮಗಳಿಗೂ ಇರುವ ಸಂಬಂಧವನ್ನು ತೋರಿಸಿದಂತೆ.

ನೀಲಕಂಠ ಶಿವಾಚಾರ್ಯರು ಶ್ರೀಕಂಠ ಶಿವಾಚಾರ್ಯರ ಬ್ರಹ್ಮಸೂತ್ರ ಭಾಷ್ಯಗಳಿಗೆ ಕಾರಿಕೆಯನ್ನು ಬರೆದವರು. ಶ್ರೀಕಂಠ ಶಿವಾಚಾರ್ಯರು ಆಗಮಗಳು 'ಅವೈದಿಕ'ವೆಂಬುದನ್ನು ನಿರಾಕರಿಸಿದವರು. ಅವರ ಭಾಷ್ಯಕೆ ತಾವು ಬರೆದ ಕಾರಿಕೆಗಳಿಗೆ 'ಕ್ರಿಯಾಸಾರ' ಎಂಬ ಹೆಸರನ್ನು ಕೊಟ್ಟಿದ್ದಾರೆ. ಕ್ರಿಯಾಸಾರದ ೨೬ ನೆಯ ಉಪದೇಶದಲ್ಲಿ ಹೀಗೆ ಬರೆಯುತ್ತಾರೆ—

"ಅತ್ರೇದಂ ತತ್ತ್ವ ಮಾಖ್ಯಾಹಿ ತಂತ್ರಣಾಂಯಾವತಾಂಕಿಮು । ಅವೈದಿಕತ್ವಂ ತಚ್ಚಾಪಿ ವೈದಿಕಾನರ್ಹತಾಥವಾ । ವೇದೇನಿಷಿದ್ಧತಾ ವೇದಮಂತ್ರಸಂಘಾಪ್ರಕಾಶ್ಯತಾ । ನಾದ್ಯಃ ಪಕ್ಷಃಸ್ತ್ವಾಗಮೋಕ್ತಾದೇವತಾಗಾರನಿರ್ಮಿತಿಃ । ಪ್ರತಿಷ್ಠಾದೇವತಾಯಾಶ್ಚಯಾಗಾದ್ಯಾಕರ್ಮ ಸಂಹಿತಿಃ । ಅಪ್ರಮಾಣಂ ಯದಿಭವೇದ್ವೇದೋಕ್ತಂ ಗತಮೇವತೆ ।.... ತಂತ್ರೋಕ್ತತ್ವಾನ್ಮಹಾಕ್ಷತಿಃ ॥ ............ ಸಮಸ್ತ ಮಂತ್ರ ಸಂಘಾಂಶ್ಚ ಯಸ್ಯನಿಶ್ವಸಿತಂ ಮಂತ್ರಾಃ । ತಸ್ಯೈವ ಸಾಂಬಮೂರ್ತೇಸ್ತುತಾಲೋಪ್ಯಪುಟಯತ್ನತಃ ॥"

[ಎಲ್ಲ ಆಗಮಗಳು ಅವೈದಿಕ ವೆನ್ನುವಿಯಲ್ಲ, ಸರ್ವ ಆಗಮಗಳು ಅವೈದಿಕವೆಂದು ನಿನ್ನ ಮತವೆ ? ಹಾಗಾದರು ಅವೈದಿಕ ವೆಂದರೇನು ? ವೈದಿಕರಿಗೆ ಅರ್ಹವಲ್ಲದುದು

ಅವೈದಿಕವೊ? ವೇದದಿಂದ ನಿಷೇಧಿಸಲ್ಪಟ್ಟುದು ಅವೈದಿಕವೊ? ವೇದ ಮಂತ್ರಗಳಿಂದ ಆಗಮೋಕ್ತ ವಿಧಾನಗಳು ಪ್ರಕಾಶಿತವಾಗಿಲ್ಲವೆಂಬುದು ಅವೈದಿಕವೊ? ಈ ಮೂರ ರಲ್ಲಿ ಮೊದಲನೆಯ ಪಕ್ಷವು ಸಿದ್ಧವಾಗದು. ಹೇಗೆಂದರೆ ತಂತ್ರದಲ್ಲಿ ಅಥವ ಆಗಮ ದಲ್ಲಿ ಹೇಳಿದುದೆಲ್ಲ ವೈದಿಕರಿಗೆ ಯೋಗ್ಯವಲ್ಲವೆಂದು ನಿನ್ನ ಮತವಿದ್ದರೆ ಆಗಮದಲ್ಲಿ ದೇವಾಲಯ ನಿರ್ಮಾಣ, ದೇವತಾ ಪ್ರತಿಷ್ಠಾನ, ದೇವತಾ ಯಾಗಾದಿ ವಿಷಯಗಳು ಉಕ್ತವಾಗಿವೆ. ಅವೆಲ್ಲ ವೈದಿಕರಿಗೆ ಅನರ್ಹವಾಗಿರುವುದರಿಂದ ವೇದದಲ್ಲಿ ಅದೇ ವಿಷಯಕ್ಕೆ ಹೇಳಿದುದೆಲ್ಲವು ಹೋಯ್ತು. ಅನೇಕ ವೈದಿಕ ವಿಷಯಗಳನ್ನು ಪ್ರತಿ ಪಾದಿಸುವದರಿಂದ ನಿನ್ನ ಪಕ್ಷವು ಮಹಾ ಅನರ್ಥಕ್ಕೆ ಮೂಲವು........ಅಂದಬಳಿಕ ಸಕಲ ವೇದರಾಶಿಯು ಆವನೊಬ್ಬ ಪರಮೇಶ್ವರನ ಶ್ವಾಸ ಮಾತ್ರವಾಗಿದೆಯೋ ಅಂತಹ ಸಾಂಬಮೂರ್ತಿಯ ತಾಲೋಷ್ಠ (ಅಂಗಳತುಟಿ) ಪ್ರಯತ್ನದಿಂದ ಹುಟ್ಟಿದ ಆಗಮಗಳು ಪರೋಕ್ಷದಿಂದ ಕಲ್ಪಿಸಿದ ಶ್ರುತಿಗಳಿಗಿಂತ ಎಷ್ಟು ಪ್ರಮಾಣಭೂತ ವಾದುವೆಂಬುದನ್ನು ನೀನು ನೋಡು. ಇದರಿಂದ ನಿನ್ನ ಪಕ್ಷಕ್ಕೆ ಮಹಾಹಾನಿಯು.೭೦ ಸಿದ್ಧರಾಮಪ್ಪನವರು ಕಾರಿಕೆಯ ವಿಚಾರ ಪರಾಮರ್ಶೆಮಾಡಿದ್ದಾರೆ; ಈ ವಿಚಾರ ಸರಣಿಯು ಲಕ್ಷಣೀಯವಾಗಿದೆ. ಆಗಮಗಳ ವೈದಿಕ ಪ್ರಮಾಣತ್ವವು ಅವು ಹೇಳುವ ದೇವಾಲಯ ನಿರ್ಮಾಣ ಮುಂತಾದುದನ್ನು ವೈದಿಕರು ಅಂಗಿಕರಿಸಬೇಕಾ ದುದರಿಂದಲು, ಶ್ರುತಿ ಸಂಘವನ್ನು ಶ್ವಾಸಮಾತ್ರದಿಂದುಸಿರಿದ ಪರಮಾತ್ಮನು ಅವು ಗಳನ್ನು ಹೇಳಿರುವದರಿಂದಲು... ಹಾಗೂ ಆಗಮದಲುಕ್ತವಾದ ಶುದ್ಧವೀರಶೈವ ಆಚಾರವು ಉಪಲಬ್ಧವಾದ ವೇದಭಾಗದಲ್ಲಿ ಸ್ಪಷ್ಟವಿರದ್ದರಿಂದ ಪರೋಕ್ಷ ಶ್ರುತಿ ಕಲ್ಪನಾದಿಂದ ಸ್ಮೃತ್ಯುಕ್ತ ಧರ್ಮವು ಹೇಗೆಯೋ ಹಾಗೆ ಅಂಗೀಕರಿಸತಕ್ಕುದಾಗಿದೆ. ಅರ್ಥಾತ್ ಶುದ್ಧರೂಪದಿಂದ ವ್ಯವಹಾರದಲ್ಲಿರಲಿಲ್ಲ ಯುಗ ಯುಗಗಳಲ್ಲಿ" ಎಂಬ ನಿರ್ಣಯವನ್ನು ತಗೆದುಕೊಂಡಿದ್ದಾರೆ. ಸಿದ್ಧರಾಮಪ್ಪನವರ ನಿರ್ಣಯವು ವೀರ ಶೈವವು ಅಶುದ್ಧರೂಪದಿಂದ ವ್ಯವಹಾರದಲ್ಲಿತ್ತು ಎಂಬ ಊಹೆಯನ್ನು ಮಾಡಲು ಪ್ರೇರೇಪಿಸುತ್ತದೆ. ಆದರೆ ಈ ಊಹೆಯನ್ನವರು ಮಾಡದೆ ಶುದ್ಧವೀರಶೈವವು ಆಗಮದಲ್ಲಿ ಉಕ್ತವಾಗಿತ್ತು; ಆದರೆ ವೇದಭಾಗದಲ್ಲಿ ಅಂದರೆ ಲಭ್ಯವಿರುವ ವೇದ ಭಾಗದಲ್ಲಿ ಸ್ಪಷ್ಟವಾಗಿ ಇರುವದಿಲ್ಲ ಎಂಬುದು ಅವರ ವಿಚಾರ. ವೇದ ವಿರೋಧ ವಾದ ಉಪನಿಷತ್ತುಗಳ ತಾತ್ತ್ವಿಕ ವಿಚಾರಗಳು, ಸಾಧನಗಳು ಆಗಮಗಳಲ್ಲಿ ಇರು ವದನ್ನು ಅವರು ಲಕ್ಷಕ್ಕೆ ತಂದುಕೊಂಡಿಲ್ಲ. ವೀರಶೈವದ ಚರ್ಯಾ, ಕ್ರಿಯಾ ಮತ್ತು ಯೋಗ ಪಾದಗಳು ಉಪನಿಷತ್ತಿನಲುಕ್ತವಾದ ಸಾಧನಗಳನ್ನೆಲ್ಲ ಅಂಗಿಕರಿಸಿವೆ; ಜ್ಞಾನಪಾದವು ತತ್ತ್ವಜಿಜ್ಞಾಸೆಯಾಗಿದ್ದು ಉಪನಿಷತ್ತಿನಲ್ಲಿಯ ತತ್ತ್ವಜಿಜ್ಞಾಸೆ ಯಾಗಿದೆ. ಇದಕ್ಕೆ ಸಾಕ್ಷಿ–

---

೭೦ ಸಿದ್ಧರಾಮಪ್ಪ ಪಾವಟೆ, ಶ್ರೀಮದಲ್ಲಮಪ್ರಭು, ಪು. ೭ ಹುಬ್ಬಳ್ಳಿ. (೧೯೩೬),

ಜ್ಞಾನಂ ಕ್ರಿಯಾಚ ಚರ್ಯಾಚ ಯೋಗಶ್ಚೇತಿ ನಗಾತ್ಮಜೇ ॥೪೬॥
ಚತುಷ್ಪಥಃ ಸಮಾಖ್ಯಾತಃ ಶಿವಧರ್ಮಃ ಸನಾತನಃ ।
ಪಶು ಪಾಶ ಪತಿಜ್ಞಾನಂ ಜ್ಞಾನಮಿತ್ಯಭಿಧೀಯತೆ ॥೪೭॥
ಷಡಧ್ವ ಶುದ್ಧಿರ್ವಿಧಿನಾಗುರ್ವಧೀನಾ ಕ್ರಿಯೋಽಚ್ಯತೇ ।
ವೀರಶೈವ ಪ್ರಯುಕ್ತಸ್ಯ ಶಿವೇನ ವಿಹಿತಶ್ಚ ಚ ॥೪೮॥
ಲಿಂಗಾರ್ಚಾದೇಃ ಸ್ವಧರ್ಮಸ್ಯ ಚರ್ಯಾ ಚರ್ಯೇತಿಕಥ್ಯತೇ ।
ತದುಕ್ತೇನೈವ ಮಾರ್ಗೇಣ ಶಿವಸುಸ್ಥಿತ ಚೇತಸಃ ॥೪೯॥
ವೃತ್ಯಂತರ ನಿರೋಧೋಽಯಂ ಸ ಯೋಗ ಇತಿ ಕಥ್ಯತೇ ।

ಪಾ. ಆ. ಪಟಲ. ೧೨ ಶ್ಲೋಕಗಳು. ೪೬-೫೦.

ಇದು ಉಪನಿಷತ್ತುಗಳಂತೆ ಅಶ್ರೌತ ಆಗಮವಾಗಿದೆ. ಇದು ಕ್ರಿಯಾ, ಚರ್ಯಾ, ಯೋಗಗಳು ಸಾಧನಗಳೆಂದು ತಿಳಿಸುವ ಸಾಹಿತ್ಯವಾದರೆ, ಜ್ಞಾನವು ಅಂದರೆ ಜ್ಞಾನ ಪಾದವು ದೇವರು, ಸೃಷ್ಟಿ, ಮತ್ತು ಬಂಧನ ಮತ್ತು ಮುಕ್ತಿ ಇವುಗಳ ತತ್ತ್ವಜ್ಞಾನ ವಾಗಿದೆ.

ಇಲ್ಲಿ ಹೇಳಲಾದ "ಎಲ್ಲ ಆಗಮಗಳು ಅವೈದಿಕ ಎನ್ನುವಿಯಲ್ಲ ? " ಎಂಬ ಮಾತು ಕೆಲವಾದರೂ ವೈದಿಕ ಆಗಮಗಳು ಇರುತ್ತವೆ ಎಂಬುದನ್ನೆತ್ತಿತೋರಿಸಿ, ವೇದದಲ್ಲಿ ತಿಳಿಸಲಾದ ವಿಷಯಗಳುಳ್ಳ ಆಗಮಗಳನ್ನು 'ಅವೈದಿಕ'ವೆಂದು ಹೆಸರಿಸಲಿ ಕ್ಕಾಗದು ಎಂಬ ನಿರ್ಣಯವನ್ನು ಕೈಕೊಳ್ಳಲಾಗಿದೆ. ಹೀಗೆ ಇಲ್ಲಿ ವ್ಯಕ್ತವಾದ ವಿಚಾರ ಗಳಿಂದ ವೇದೋಕ್ತ ವಿಷಯ ಪ್ರತಿಪಾದಿಸುವ ಅಂದರೆ ಶ್ರೌತ ಆಗಮವು, ಹಾಗೂ ವೇದವನ್ನು ನಿಂದಿಸಿ ಅಲ್ಲಿಯ ಸಾಧನಗಳ ಬದಲಿಯ ವ್ಯವಸ್ಥೆಯನ್ನು ಉಪನಿಷತ್ತು ಗಳಂತೆ ಸಾಧನ ವ್ಯವಸ್ಥೆಗೊಳಿಸಿದ್ದು ಅಶ್ರೌತ ಆಗಮವು. ಅಂದರೆ ಅಶ್ರೌತ ಆಗಮ ಶ್ರೌತಾಗಮ ಹೀಗೆ ಎರಡು ಪ್ರಕಾರದ ಆಗಮಗಳನ್ನು ಗುರುತಿಸಿ ಅವುಗಳ ಅಸ್ತಿತ್ವವು ಇರುವುದು ಕ್ರಿಯಾಸಾರದ ಕಾರಿಕೆಗಳಿಂದ ಗೊತ್ತಾಗುತ್ತದೆ. ಈ ವಿಷಯವು ಕ್ರಿಯಾಸಾರದಲ್ಲಿ ಬರಲು ಶ್ರೀಕಂಠರು ಬರೆದ ಬ್ರಹ್ಮಸೂತ್ರ ಭಾಷ್ಯವೆ ಕಾರಣ. ಅಂದರೆ ಶ್ರೀಕಂಠ ಶಿವಾಚಾರ್ಯರು ಭಾಷ್ಯವನ್ನು ಬರೆದ ಶತಮಾನಗಳಲ್ಲಿ ಅಸ್ತಿತ್ವ ದಲ್ಲಿದ್ದ ಆಗಮ ಪ್ರಭೇದಗಳು ಇವು ಆಗಿವೆ. ಈ ಪ್ರಭೇದದ ಮೂಲವು ಇಂದಿಗೆ ಸುಮಾರು ಎರಡು ಸಾವಿರ ವರ್ಷಗಳ ಪೂರ್ವದಲ್ಲಿದ್ದ ಶೈವಾಗಮಗಳ ಕಾಲದ್ದು. ಆಗಿನಿಂದ ಶ್ರೀಕಂಠ ಶಿವಾಚಾರ್ಯರ ಕಾಲದವರೆಗೆ ಶ್ರೌತಾಶ್ರೌತ ಆಗಮಿಕ ಆಚಾರ ವಿಚಾರಗಳು ರೂಢಿಯಲ್ಲಿದ್ದವೆಂಬುದು ಖಚಿತವಾಗುತ್ತದೆ. ವೇದೋಪನಿಷತ್ತುಗಳ ಶ್ರೌತಾಶ್ರೌತ ವಿಚಾರವಾದವು ಆಗಮದಲ್ಲಿಯೂ, ಮತ್ತು ಸೂತ್ರಭಾಷ್ಯಗಳಲ್ಲಿಯೂ ಹರಿದುಬಂದುದು ಅದರ ಅವಿಚ್ಛಿನ್ನತೆಗೆ ಸಾಕ್ಷಿ ಎಂಬುದು ಇಲ್ಲಿಯ ಅಭಿ ಪ್ರಾಯವು. ಈ ರೀತಿಯಿಂದ ಶಿವಾಗಮಗಳಿಗೂ ವೇದೋಪನಿಷತ್ತು (ಶ್ರುತಿ)ಗಳಿಗೂ ನಿಕಟವಾದ ಸಂಬಂಧವಿರುವುದು ಸಿದ್ಧವಾಗುತ್ತದೆ.

(೬) ಡಾ. ಎಸ್. ಸಿ. ನಂದಿಮಠ ಅವರು ಒಬ್ಬ ಆಗಮ ಸಾಹಿತ್ಯ ವಿಶಾರದರು. ವೇದ ಹಾಗೂ ಆಗಮಗಳ ನಿಕಟಸಂಬಂಧದ ವಿಚಾರಮಾಡಿದವರಲ್ಲಿ ಒಬ್ಬರು. ಅವರು ವೇದಾಗಮಗಳ ಸಂಬಂಧವನ್ನು ತೋರಿಸುವುದು ಇಂತಿದೆ—

In this we come across some material which will help us to determine the relation of the Saivagamas, as we possess them now, with the Vedas, in respect only to their ritualistic phase.

...It contains all Vaidika elements. All duties of Vedic form are present. There are many Vaidika Mantras [೭೧]

ಡಾ. ಎಸ್. ಸಿ. ನಂದಿಮಠ ಅವರು ವೇದದಲ್ಲಿ ಬರುವ ರುದ್ರ, ಶಿವ, ಪಶುಪತಿ, ಮಹಾದೇವ, ಸ್ತಂಭ ಎಂಬ ಹೆಸರುಗಳು ಆಗಮೋಕ್ತವಾಗಿರುವುದನ್ನು; ಸ್ಕಂದ, ಋಷಭ, ವಾಮದೇವ, ಮೊದಲಾದ ಋಷಿ ಮುನಿಗಳನ್ನು; ಈಶಾನ, ತತ್ಪುರುಷ, ಅಘೋರ ಮೊದಲಾದ ಪಂಚ ಬ್ರಹ್ಮರನ್ನು; ಶತರುದ್ರೀಯ, ಪುಣ್ಯಾಹ, ಶಿವಪಂಚಾಕ್ಷರ ಮಂತ್ರ, ಪಾಣಿಮಂತ್ರಂ ಪವಿತ್ರಂ ಮುಂತಾದವುಗಳನ್ನು; ಜ್ಯೋತಿಷ್ಟೋಮ ಮುಂತಾದ ಯಜ್ಞ ಯಾಗಾದಿಗಳನ್ನು, ಹೋಮ ಹವನಗಳನ್ನು ವೇದದಿಂದ ತಗೆದುಕೊಂಡುದನ್ನು ಎತ್ತಿ ತೋರಿಸುವ ಮೂಲಕ ವೇದಾಗಮಗಳ ಸಂಬಂಧವನ್ನು ತೋರಿಸಿದ್ದಾರೆ.

ವೇದೋಪನಿಷತ್ತುಗಳು ಶ್ರುತಿಗಳೆಂದು ಸುಪ್ರಸಿದ್ಧ. ಈ ಶ್ರುತಿಗಳು ಅನುಕ್ರಮವಾಗಿ ಶ್ರೌತ ಮತ್ತು ಅಶ್ರೌತ ವಿಚಾರ ಹಾಗೂ ಆಚಾರಗಳಿಂದಾಗಿರುವಂತೆ ಶೈವಾಗಮಗಳೂ ಇದೇ ಅರ್ಥಗಳಲ್ಲಿ ಶ್ರೌತ ಮತ್ತು ಅಶ್ರೌತಗಳಾಗಿ ಇವೆರಡರ ಸಂಬಂಧವು ನಿಕಟವಾಗಿರುವುದನ್ನು ಇಲ್ಲಿಯವರೆಗೆ ಎತ್ತಿ ತೋರಿಸಲಾಯಿತು.

## VI ಶ್ರೌತಾ ಶ್ರೌತ ಆಗಮ ಪರಾಮರ್ಶೆ ಸ್ಥಲ

ಈಗ ಆಗಮಗಳ ಶ್ರೌತಾಶ್ರೌತ ಭೇದವನ್ನು ಪ್ರಾಚೀನ ಸಾಹಿತ್ಯದಿಂದ ಎತ್ತಿ ತೋರಿಸಿ ಆಗಮಗಳ ಅಶ್ರೌತತೆಯನ್ನು ಕುರಿತು ಉಲ್ಲೇಖಿಸಿದ ವಿದ್ವಾಂಸರಲ್ಲಿ ರಂ. ರಾ. ದಿವಾಕರರು ಒಬ್ಬರು. ಅವರು ವೀರಶೈವ ಆಗಮ ಪರಂಪರೆಯ ವಿಚಾರ

೭೧ The Journal of Karanatak University Vol. VII. p. 18, (1963)

ಪರಾಮರ್ಶಿಸುವಲ್ಲಿ ತೊಡಗಿದವರು. ಅವರ ಪರಾಮರ್ಶೆಯ ಹಸಿಗೆಯು ಈ ಸಂದರ್ಭದಲ್ಲಿ ಅತ್ಯಂತ ಪ್ರಸ್ತುತ.

ರಂಗನಾಥ ದಿವಾಕರರು ವಚನಶಾಸ್ತ್ರ ರಹಸ್ಯವೆಂಬ ಪಾಂಡಿತ್ಯಪೂರ್ಣ ಗ್ರಂಥ ವೊಂದನ್ನು ಬರೆದಿದ್ದಾರೆ. ಷಟ್‌ಸ್ಥಲ ಶಾಸ್ತ್ರ ಮತ್ತು ವೀರಶೈವ ಪರಂಪರೆ ಎಂಬುದು ಈ ಗ್ರಂಥದಲ್ಲಿಯ ೯ನೆಯ ಪ್ರಕರಣ. ಇದರಲ್ಲಿ ವಚನಕಾರರ ಮಾರ್ಗವು ಆಗಮೋಕ್ತವು ಅರ್ಥಾತ್ ವೈದಿಕವು ಎಂದು ೪ನೇ ಪರಿಚ್ಛೇದದಲ್ಲಿ ಸ್ಪಷ್ಟವಾಗಿ ತಿಳಿಸುತ್ತಾರೆ. ಮುಂದೆ ೨ನೆಯ ಪರಿಚ್ಛೇದದಲ್ಲಿ ವೈದಿಕ ಮತ್ತು ಅವೈದಿಕ ಆಗಮ ಗಳು ಎಂಬ ವಿಷಯ ವಿವರಣೆ ಬರುತ್ತದೆ. "ಆಗಮಗಳನ್ನು ವೈದಿಕ ಮತ್ತು ಅವೈದಿಕ ಎಂದೂ ವಿಂಗಡಿಸುವದುಂಟು. ಬಹುಶಃ ವಾಮಾಚಾರವನ್ನು ಹೇಳುವ ಆಗಮಗಳು ಅವೈದಿಕವೆನಿಸುವವು. ಒಮ್ಮೊಮ್ಮೆ ಪಾಂಚರಾತ್ರದಂಥ ಆಗಮವನ್ನು ಕೂಡ ಅವೈದಿಕ ಗುಂಪಿನಲ್ಲಿ ಸೇರಿಸುವರು ! ಕೂರ್ಮ ಪುರಾಣದ ೧೬ನೆಯ ಅಧ್ಯಾಯದಲ್ಲಿ ಕಾಪಾಲ, ಲಾಕುಲ, ವಾಮ, ಭೈರವ, ಪೂರ್ವ, ಪಶ್ಚಿಮ, ಪಾಶುಪತಿ ಇತ್ಯಾದಿ ಆಗಮಗಳು ಅವೈದಿಕವೆಂದು ಹೇಳಲ್ಪಟ್ಟಿವೆ. ಅದೇ ಕೂರ್ಮ ಪುರಾಣದ ಉತ್ತರ ಭಾಗದಲ್ಲಿ (ಅಧ್ಯಾಯ ೩೮). 'ಮೋಕ್ಷಾರ್ಥ'ವಾಗಿ ಮೊದಲು ನನ್ನಿಂದ ಶ್ರೌತಪಾಶುಪತವು ಸ್ಥಾಪಿಸಲ್ಪಟ್ಟಿತು. ವೇದ ಪರಾಯಣರು ಇದನ್ನು ಆಚರಿಸ ಬೇಕು. ಆ ಬಳಿಕ ನಾನು ವೇದ ವಿರುದ್ಧವಾದ ಪಾಶುಪತ, ಸೋಮ, ಲಾಕುಲ, ಭೈರವವೆಂಬ ಮತಗಳನ್ನು ಸ್ಥಾಪಿಸಿದೆನು. ಇವು ವೇದ ಬಾಹ್ಯವಿದ್ದು ಇವುಗಳನ್ನು ಮೋಕ್ಷಾರ್ಥಿಗಳು ಆಚರಿಸಕೂಡದು.' ಎಂಬ ಸ್ಪಷ್ಟ ಉಲ್ಲೇಖವಿರುವುದು. ಸನತ್ ಕುಮಾರ ಸಂಹಿತೆಯಲ್ಲಿ, ಶಿವಾಗಮಗಳು ಶ್ರೌತ, ಅಶ್ರೌತ, ಎಂದು ಎರಡು ಬಗೆ ಯಾಗಿರುವವು. ಶ್ರೌತಾಶ್ರೌತ ವಿಭೇದೇನ ದ್ವಿವಿಧಾಸ್ತು ಶಿವಾಗಮಃ ।

ಎಂದು ವಚನವಿರುವುದು. ವಾಯುಸಂಹಿತೆಯ ೨೮ನೆಯ ಅಧ್ಯಾಯ ದಲ್ಲಿಯೂ–

ಶೈವಾಗಮೋಪಿ ದ್ವಿವಿಧಃ ಶ್ರೌತಾಶ್ರೌತಶ್ಚ ಸಂಸ್ಕೃತಃ ।
ಶ್ರುತಿ ಸಾರಮಯಃ ಶ್ರೌತಃ ಸ್ವತಂತ್ರಸ್ತ್ವಿತರೋ ಮತ ಃ ॥

....ಆಯಾ ಆಗಮಗಳಲ್ಲಿಯ ಆಚಾರಗಳು ವೇದಸಮ್ಮತ ಅಥವಾ ವೇದ ಬಾಹ್ಯ ಇರುವವು, ಎಂದು ಹೇಳುವುದೇ ಹೀಗೆ ಹೆಸರಿಡುವವರ ಅಭಿಪ್ರಾಯವಿತ್ತು." ಹನ್ನೊಂದನೆಯ ಪರಿಚ್ಛೇದದಲ್ಲಿ "ಶೈವಾಗಮಗಳಲ್ಲಿ ವೈದಿಕ ಮತ್ತು ಅವೈದಿಕ, ಎಂದು ಎರಡು ಬಗೆಯ ಮುಖ್ಯ ಗುಂಪುಗಳಿರುವವೆಂದು ಮೇಲೆಯೇ ಹೇಳಿದೆ... .... ಮುಂತಾದ ಅವೈದಿಕ ಶೈವಪಂಥಗಳೊಡನೆ ಮತ್ತು ಅವುಗಳನ್ನು ಪ್ರತಿಪಾದಿಸುವ

ಆಗಮಗಳೊಡನೆ ಇಲ್ಲಿ ನಮ್ಮದೇನೂ ಕರ್ತವ್ಯವಿಲ್ಲ. ವೈದಿಕ ಶೈವ ಪಂಥ....”೭೨ ಇದು ಅಲ್ಲದೆ ಇದೇ ಗ್ರಂಥದ ೧ ನೆಯ ಪ್ರಕರಣ: ವಚನಶಾಸ್ತ್ರವೂ ಅದರ ಮಹತ್ವವೂ ಎಂಬುದರಲ್ಲಿ ಆಗಮಗಳಲ್ಲಿ ಶೈವ, ವೈಷ್ಣವ, ಮತ್ತು ಶಾಕ್ತ ಎಂದು ತ್ರಿಭೇದದಕಾರಣವನ್ನು ತಿಳಿಸಿ, ಆಮೇಲೆ.... “ಇದಲ್ಲದೆ ವೈದಿಕ ಹಾಗೂ ಅವೈದಿಕವೆಂಬ ಅಥವ ದಕ್ಷಿಣಾಚಾರ ಹಾಗೂ ವಾಮಾಚಾರವೆಂಬ ಮೇಲು ಕೀಳು ಆಚಾರಗಳನ್ನು ಹೇಳುವ ಗ್ರಂಥಗಳು ಎಂದು ಈ ಆಗಮಗಳಲ್ಲಿ ಮತ್ತೆ ಭೇದಗಳಿರುವವು. ಆದರೆ ಇಲ್ಲಿ ನಮಗೆ ಪ್ರಸ್ತುತವಾದ ಗ್ರಂಥಗಳೆಂದರೆ ವೈದಿಕವೆಂದೆನಿಸುವ ಇಪ್ಪತ್ತೆಂಟು ಶೈವಾಗಮಂಗಳು.೭೩”

ರಂಗನಾಥ ದಿವಾಕರರು ಆಗಮಗಳಲ್ಲಿ ಶ್ರೌತ ಮತ್ತು ಅಶ್ರೌತವೆಂಬ ಭೇಧಗಳು ಅಥವ ವೈದಿಕ ಹಾಗೂ ಅವೈದಿಕವೆಂಬ ಭೇದಗಳು ದಕ್ಷಿಣಾಚಾರ ಹಾಗೂ ವಾಮಾಚಾರಗಳನ್ನು ತಿಳಿಸುವವು ಎಂದು ಬರೆಯುತ್ತ ಪಂಚರಾತ್ರಾಗಮಗಳಲ್ಲಿ ಕೂಡ ವೈದಿಕ ಮತ್ತು ಅವೈದಿಕ ವೆಂಬ ಭೇದಗಳು ಉಲ್ಲೇಖಿಸಿದ ಅವರು ಆಶ್ಚರ್ಯವನ್ನು ವ್ಯಕ್ತಪಡಿಸಿದರೆ, ಶೈವಾಗಮಗಳಲ್ಲಿ ಶ್ರೌತ ಮತ್ತು ಅಶ್ರೌತ (ವೈದಿಕ ಮತ್ತು ಅವೈದಿಕ) ಎಂಬ ಭೇಧಗಳನ್ನು ಕುರಿತು ಆ ಉದ್ಗಾರ ತೆಗೆಯಲಿಲ್ಲ. ಕಾರಣ ಪಂಚರಾತ್ರಾಗಮಗಳು ಅವೈದಿಕ ವಿರುವುದು ಅಸಾಧ್ಯ ವೆಂಬ ಗ್ರಹಿಕೆ. ಯಾಕೆಂದರೆ ವಾಮಾಚಾರವು ಪಂಚರಾತ್ರಾಗಮಗಳಲ್ಲಿ ಇಲ್ಲದಿರವುದು ಪ್ರಸಿದ್ಧ. ಆದರೂ ಅವೈದಿಕ ವೆಂಬ ಭೇದವು ಪಂಚರಾತ್ರಾಗಮಗಳಲ್ಲಿರುವುದರ ಬಗ್ಗೆ ಅವರು ದೀರ್ಘ ಆಲೋಚನೆ ಮಾಡಲಿಲ್ಲ, ಅಥವ ಅವೈದಿಕ ಪಂಚರಾತ್ರಾಗಮ ಎಂದು ಹೇಳಲು ಕಾರಣವೇನಿರಬೇಕೆಂಬ ಬಗ್ಗೆ ಆ ಆಗಮಗಳು ಏನಾದರೂ ಕಾರಣವನ್ನು ಕೊಟ್ಟಿರುವವೆ ? ಎಂಬ ಬಗ್ಗೆ ಗಮನವನ್ನು ಹರಿಸಿಲ್ಲ. ಅದೇ ರೀತಿ ಅವರು ಶೈವಾಗಮಗಳಲ್ಲಿ ಅಷ್ಟೇ ಏಕೆ ವೈದಿಕ ಶೈವಾಗಮಗಳು ಎಂದು ಅವರು ತಿಳಿಸುವ ಆಗಮಗಳಲ್ಲಿ ಕೂಡ ಅದರಲ್ಲೂ ವೀರಶೈವಧರ್ಮವನ್ನು ಕುರಿತು ತಿಳಿಸುವ ಆಗಮಗಳಲ್ಲಿಯೂ ಕೂಡ ಶ್ರೌತ ಮತ್ತು ಅಶ್ರೌತ ಭೇದಗಳಿರುವದುಂಟು. ಇದು ದಿವಾಕರರಿಗೆ ಗೊತ್ತಿಲ್ಲ. ಆದ್ದರಿಂದ ಅವರು ‘ಇಲ್ಲಿನಮಗೆ ಪ್ರಸ್ತುತವಾದ ಗ್ರಂಥಗಳೆಂದರೆ ವೈದಿಕವೆನಿಸುವ ಇಪ್ಪತ್ತೆಂಟು ಶೈವಾಗಮಗಳು’ ಎಂದು ಬರೆದಿದ್ದಾರೆ. ಹೀಗೆ ಅವರು ‘ವೈದಿಕವೆನಿಸುವ’ ಎಂದು ಹೇಳುವಲ್ಲಿ ಅವೈದಿಕ ಭೇದವು ಈ

---

೭೨ ರಂ. ರಾ. ದಿವಾಕರ, ವಚನ ಶಾಸ್ತ್ರ ರಹಸ್ಯ, ಪು. ೧೭೪-೧೭೫. ಪು. ೧೭೮ ಮೂರು ಸಾವಿರ ಮಠ ಹುಬ್ಬಳ್ಳಿ (೧೯೬೮).

೭೩ ರಂ. ರಾ. ದಿವಾಕರ, ವಚನ ಶಾಸ್ತ್ರ ರಹಸ್ಯ ಪು. ೧೭೯-೮೦ ಮೂರುಸಾವಿರಮಠ ಹುಬ್ಬಳ್ಳಿ (1968).

ವೈದಿಕ ಶೈವಾಗಮಗಳಲ್ಲಿ ಇರುವದಿಲ್ಲವೆಂಬುದು ಅವರ ಪ್ರಾಮಾಣಿಕ ಗ್ರಹಿಕೆ. ಇದು ಅವರು ತುಂಬಾ ಜಾಗರೂಕತೆಯಿಂದ ತಿಳಿಸಿದ ನಿರ್ಣಯ. ಆದರೆ ವೈದಿಕ ಆಗಮುಗಳಲ್ಲಿಯಷ್ಟೇ ಪ್ರತಿಪಾದಿತವಾಗಿರುವ ವೀರಶೈವ ಆಚರಣೆಗಳು ಶ್ರೌತ ಮತ್ತು ಅಶ್ರೌತವಿರುವವೆಂದು ಆಗಮುಗಳು ತಿಳಿಸಿದ ಈ ಸಂದರ್ಭದಲ್ಲಿ ಅಶ್ರೌತದ ಅರ್ಥವು ತುಂಬಾ ಪ್ರಚಾರದಲ್ಲಿ ಇರುವ ಅಶ್ರೌತಾಚಾರವೆಂಬರ್ಥದಿಂದ ಭಿನ್ನವಾದ ಅರ್ಥಚ್ಛಾಯೆ ಇರುವುದನ್ನು ದಿವ್ಯಾಗಮುಗಳಲ್ಲಿ ತಿಳಿಸಲಾಗಿದೆ ಎಂಬುದು ಗಮನಿಸಬೇಕಾದ ವಿಚಾರ. ಈ ಭೇದದ ಕಾರಣವು ಕೂಡ ಪಂಚರಾತ್ರಾಗಮುಗಳಲ್ಲಿರುವ ಅಶ್ರೌತ ಭೇದಕ್ಕೂ ವಿವರಣೆ ಆಗಬಹುದು. ಪಂಚರಾತ್ರಾಗಮದ ಅನುಯಾಯಿಗಳಲ್ಲಿಯ ವೀರವೈಷ್ಣವರೆಂದು ಪ್ರಸಿದ್ಧಿ ಪಡೆದ ವೈಷ್ಣವ ಶಾಖೆಗೆ ಸೇರಿದ ರಾಮಾನುಜರ ಆಚಾರ ಮತ್ತು ವಿಚಾರಗಳು ಅಶ್ರೌತ ಪಂಚರಾತ್ರಾಗಮ ಭೇದದವುಗಳೆಂದೇ ಅರ್ಥೈಸಬೇಕಾಗುತ್ತದೆ–[೭೪] Dhaṇurdasa was a Sudra. Often, Ramanuja was found returning from his river bath leaning on the shoulders of Dhanurdas, a Sudra. This exercised the minds of his Brahmin disciples very much. They once made bold to ask him for an explanation: Ramanuja said; "O Vaisnavas, have not heard that learning riches and high birth make one swell with pride, but adorn a wise man....?.... ಇದು ನಿಜಕ್ಕೂ ಶ್ರೌತಾಚಾರವಲ್ಲ. ಇದು ಉಪನಿಷದಾಚಾರವೆಸ್ಸೈ. ಅಂದರೆ ಅಶ್ರೌತಾಚಾರ. ಹೀಗೆ ವೈದಿಕ ಪಂಚರಾತ್ರಾಗಮವೆ ಇರಲಿ, ವೈದಿಕ ಶೈವಾಗಮವೆ ಇರಲಿ ಅವೆರಡರಲ್ಲಿಯು ಶ್ರೌತ ಮತ್ತು ಅಶ್ರೌತಗಳು ಇದ್ದೇ ಇವೆ. ಆದರೆ ಇಲ್ಲಿಯ ಅಶ್ರೌತವು ವಾಮಾಚಾರವಾಗಿರದೆ ಅದು Agamic free thinking ಆಗಮದ ಮುಕ್ತವಿವೇಕವಾಗಿದ್ದು, ಅದರ ಅನುಷ್ಠಾನವೆ ಆಗಿದೆ. ಇದು ಅಶ್ರೌತದ ಬೇರೊಂದು ಅರ್ಥಚ್ಛಾಯೆ ಆಗಿದೆ. ಇಲ್ಲಿಯವರೆಗೆ ಆಗಮ ಮತ್ತು ವೇದಗಳ ಸಾರಭೂತವಾದ ಸಂಬಂಧವನ್ನು ಸ್ವಲ್ಪದರಲ್ಲಿ ಭಿನ್ನ ಭಿನ್ನ ದೃಷ್ಟಿ ಕೋನಗಳಿಂದ ಅರಿತಂತಾಯಿತು. ಈ ಸಂಬಂಧವು ಕರ್ತೃ, ಸಾಧನ, ವಸ್ತು ಹಾಗೂ ಶ್ರೌತಾಶ್ರೌತಗಳ ಸಂಬಂಧವು. ಈ ಹಿನ್ನೆಲೆಯಲ್ಲಿ ಅಂದರೆ ಇಲ್ಲಿಯವರೆಗೆ ನಡೆದ ವಿವರಣೆಯ ಹಿನ್ನೆಲೆಯಲ್ಲಿ ಶೈವಾಗಮುಗಳಲ್ಲಿ– ೨೮ ದಿವ್ಯಾಗಮಂಗಳಲ್ಲಿ–ಇರುವ ಶ್ರೌತಾಶ್ರೌತ ವಿಚಾರವೇನೆಂಬುದನ್ನರಿಯುವಾ.

---

೭೪. M. Yamunacharya, Ramanuja's Teachings in his own words. P. 34 Bhavan's Book University (1970)

ಸನತ್ಕುಮಾರ ಸಂಹಿತೆಯು ಆಗಮ ಭೇದವನ್ನು ತಿಳಿಸಲು 'ಶ್ರೌತಾಶ್ರೌತ'ದ ವಿಚಾರವೇ ಕಾರಣವೆಂದು ಹೇಳಿದರೆ, ವಾಯುವೀಯ ಸಂಹಿತೆಯು 'ಶ್ರೌತ' ಮತ್ತು 'ಸ್ವತಂತ್ರ'ವೆಂಬ ವಿಚಾರಗಳು ಕಾರಣವೆಂದು ಹೇಳುವದು. ಎರಡೂ ಉಪಬೃಂಹಣಗಳಲ್ಲಿ ಶ್ರೌತವೆಂಬುದು ಸಾಮಾನ್ಯವಾಗಿರುವುದು. ಸನತ್ಕುಮಾರ ಸಂಹಿತೆಯು ಹೇಳುವ 'ಅಶ್ರೌತ' ಪದದ ಬದಲು 'ಸ್ವತಂತ್ರ' ಎಂಬ ಪದವನ್ನು ವಾಯುವೀಯಸಂಹಿತೆಯು ಬಳಸುತ್ತದೆ. ನಾವೀಗ 'ಅಶ್ರೌತ' ಮತ್ತು 'ಸ್ವತಂತ್ರ' ಎಂಬ ಪದಗಳು ಒಂದೇ ಅರ್ಥ ಕೊಡುವಂಥವು ಎಂದು ಅರಿತುಕೊಳ್ಳಬೇಕಾಗುತ್ತದೆ. ಆದ್ದರಿಂದ ಅವೆರಡು ಸಮಾನಾರ್ಥ ಬೋಧಿಸುವ ಪದಗಳು ಇಲ್ಲವೆ ಪರ್ಯಾಯ ಪದಗಳು: ವಾಯುವೀಯ ಸಂಹಿತೆಯು ಬಳಸುವ 'ಸ್ವತಂತ್ರ' ಎಂಬ ಪದವು ಸನತ್ಕುಮಾರ ಸಂಹಿತೆಯು ಬಳಸುವ 'ಅಶ್ರೌತ' ಪದಕಿಂತಲೂ ಸುಶ್ರಾವ್ಯವಾಗಿದೆ, ಉತ್ತಮಾರ್ಥ ಸೂಚಿಸುವಂತಿದೆ. ಯಾಕಂದರೆ 'ಅಶ್ರೌತ' ಎಂಬ ಪದವು 'ನಾಸ್ತಿಕ', 'ಅನಾಚಾರ' ವಿಚಾರಗಳು ಮತ್ತು ಆಚಾರಗಳು ಎಂಬರ್ಥ ಪ್ರತಿಪಾದಕವಾಗಿರುವದರಿಂದ ಪ್ರೊ. ಎಂ. ಹಿರಿಯಣ್ಣ ಅವರು ಈ ಪದದರ್ಥವನ್ನು ಮಾಡುವಾಗ ಅಂದರೆ (heretic) ಎಂಬ ಪದದ ಅರ್ಥ ಮಾಡುವಾಗ ಬಹಳ ಎಚ್ಚರಿಕೆಯಿಂದ ಅರ್ಥ ಮಾಡಬೇಕು, ಇದರಿಂದ ಅಪಾರ್ಥವಾಗುವದು ತಪ್ಪುವುದು ಎಂದು ಬರೆದಿದ್ದಾರೆ. ಈ ಎಚ್ಚರಿಕೆಯ ಮಾತು 'ಅಶ್ರೌತ' ಶಬ್ದ ಬಳಕೆಯಲ್ಲಿ ಅವಶ್ಯವಿದೆ. ಆದರೆ ವಾಯುವೀಯ ಸಂಹಿತೆಯು ಬಳಸುವ 'ಸ್ವತಂತ್ರ' ಎಂಬ ಪದದ ವಿಷಯದಲ್ಲಿ ಆ ಎಚ್ಚರಿಕೆಯ ಅವಶ್ಯಕತೆ ಇರುವದಿಲ್ಲ. ಅದನ್ನು 'free-thinking' ಮುಕ್ತವಿಚಾರವಾದ ಎಂದು ಅರ್ಥೈಸ ಬಹುದಾಗಿದೆ. 'ಸ್ವತಂತ್ರ'ವೆಂಬುದು ವಿವೇಕದ ಮಾತಾಗಿದೆ ಎಂಬುದನ್ನರಿತುಕೊಂಡರೆ, ಹೆಚ್ಚು ಸುಲಭವಾಗಿ ಸರಿಯಾದ ಅರ್ಥವೆಂದರಿಯಲು ಬರುತ್ತದೆ. ಇದು ವಾಯುವೀಯ ಸಂಹಿತೆಯ ಪದ ಬಳಕೆಯ ಹಿರಿಮೆ.

ಆಗಮಭೇದವು ಇದು ಒಂದೇ ರೀತಿಯದಿದೆಯೆಂದೇನು ತಿಳಿಯಬೇಕಾಗಿಲ್ಲ. ಮತ್ತೆ ಹಲವು ರೀತಿಯ ಭೇದಗಳಿವೆ. ಉದಾಹರಣೆಗೆ ಇಲ್ಲಿ ಉಲ್ಲೇಖಿಸಬಹುದಾದ ಒಂದು ಭೇದವೆಂದರೆ ಶಿವಭೇದ, ಮತ್ತು ರುದ್ರಭೇದ. ಇದು ಕರ್ತೃಭೇದ. ದಿವ್ಯಾಗಮಗಳ ಭೇದವಿದು. 'ಶ್ರೌತಾಶ್ರೌತ' ಅಥವ 'ಶ್ರೌತ' ಮತ್ತು 'ಸ್ವತಂತ್ರ' ಭೇದವು ಆಚಾರಭೇದವು. ಈ ಬಗ್ಗೆ ಸರಿಯಾದ ಸಂದರ್ಭದಲ್ಲಿ ವಿವರಣೆಯನ್ನು ಕೊಡಲಾಗುವುದು.

ವಾಯುವೀಯ, ಸನತ್ಕುಮಾರ, ವಿದ್ಯೇಶ್ವರ ಮುಂತಾದ ಸಂಹಿತೆಗಳು ನಿಗಮ ಮತ್ತು ಆಗಮಗಳ ರಹಸ್ಯ ವಿಚಾರಗಳ ವಿವರಣಾ ಗ್ರಂಥಗಳಾಗಿವೆ ಅಥವ ಉಪ

ಬೃಂಹಣಗಳಾಗಿವೆ. ಆದ್ದರಿಂದ ಅವುಗಳಲ್ಲಿಯ ಮಹತ್ವದ ವಿಚಾರಗಳು ಈ ಉಪಬೃಂಹಣಗಳಲ್ಲಿರುವ ವಿಷಯ, ವಿಚಾರ ಆಚಾರಗಳು ನಿಗಮಾಗಮಗಳಲ್ಲಿರುವುದು ಸ್ವಾಭಾವಿಕ. ಇದು ನಿರ್ವಿವಾದ ಮಾತು. ಆದ್ದರಿಂದ ಪ್ರಸ್ತುತ ಲೇಖಕರು 'ಶ್ರೌತಾಶ್ರೌತ' ಅಥವ 'ಶ್ರೌತ' ಮತ್ತು 'ಸ್ವತಂತ್ರ'ಗಳನ್ನು ಕುರಿತ ವಿಚಾರಗಳನ್ನು ಆಗಮಗಳಲ್ಲರಸಲು ಪ್ರಾರಂಭಮಾಡಿದರು. ಆಗಮಗಳ ನಂತರದಲ್ಲಿ ಬಂದ ಸ್ಮೃತಿಗಳು ಕೂಡ ಶ್ರೌತಾಶ್ರೌತ ವಿಚಾರ ಕುರಿತು ಪ್ರತಿಪಾದಿಸುವದೂ ಕಂಡು ಬರುವದು. ಸೂಕ್ಷ್ಮಮತಿಗಳಿಗೆ ಇದು ಸುಲಭವೇದ್ಯ. ಸ್ಮೃತಿಕಾರರಲ್ಲೊಬ್ಬ ಆಪಸ್ತಂಬ ಋಷಿಗಳು. ಅವರು ಕೂಡ ಶ್ರೌತಾಗಮದಂತೆ ಅಶ್ರೌತಾಗಮವು ಪ್ರಮಾಣವಾಗಿದೆ ಎಂದು ತಿಳಿಸಿದ್ದು ಇಂತಿದೆ—"ಸಕಲ ವೇದಾರ್ಥ ಪರಿಜ್ಞಾನವುಳ್ಳ ಆಪಸ್ತಂಬನು ವಿಶಿಷ್ಟ ವೇದಾರ್ಥವನ್ನು ಅರಿತುಕೊಳ್ಳಲು ಸಮರ್ಥರಲ್ಲದವರಿಗೆ ಸಮಸ್ತ ಶ್ರೌತಸಿದ್ಧಾಂತದ ಜ್ಞಾನವನ್ನುಂಟುಮಾಡಿಕೊಡುವದಕ್ಕಾಗಿ ಧರ್ಮಸೂತ್ರ ಗಳನ್ನು ರಚಿಸಲು ತೊಡಗಿ " ಸ್ಪಷ್ಟಮಾಮ್ನಾಯೈಃ " ಎಂದು ಬರಿಯದೆ " ಆಮ್ನಾಯೈರವಿರುದ್ಧಾಃ ಪ್ರಮಾಣಂ " ಎಂಬುದಾಗಿ ಸೂತ್ರಿಸಿರುವುದರಲ್ಲಿ "ಅವಿರುದ್ಧಾಃ ಪ್ರಮಾಣಂ" ಎಂದಿರುವ 'ಅವಿರುದ್ಧ' ಎಂಬ ಶಬ್ದ ಸ್ವಾರಸ್ಯದಿಂದ ವೇದ ವಿರುದ್ಧಗಳಾದ ಶೈವಾಗಮಗಳೂ 'ಸ್ಮೃತಿ ಮುಂತಾದವುಗಳೂ ಪ್ರಮಾಣ ರೂಪೇಣ ಅಭಿಪ್ರೇತಗಳಾಗಿವೆ." ೭೫ ಎಂದು ತಿಳಿಸಿದ್ದಾರೆ. ಈ ಅವತರಣಿಕೆಯು ಆಗಮಗಳು ಶೃತಿ ವಿರುದ್ಧವಾದಂಥವುಗಳು ಇದ್ದು ಅವುಕೂಡ ಪ್ರಮಾಣಗಳೇ ಆಗಿವೆ ಎಂಬ ನಿರ್ಣಯವಿದೆ. ಕರ್ಮಮೀಮಾಂಸಕರಿಗೆ ವೇದವು, ಶ್ರುತಿಯು,ಪ್ರಮಾಣ ವಾಗಿರುವಂತೆ ವೇದದಲ್ಲಿರುವ ಕರ್ಮ ಮೀಮಾಂಸಕರ ಶ್ರುತಿಯ, ವಿರುದ್ಧದವರಿಗೂ ವೇದವು ಪ್ರಮಾಣವಾಗಿದೆ. ಉಪನಿಷತ್ತುಗಳಿಗೆ ಶ್ರುತಿಯು ಪ್ರಮಾಣ. ಯಾಕಂದರೆ ಕರ್ಮಕಾಂಡವೆಂದೆನಿಸಿಕೊಳ್ಳುವ ವೇದದ ಭಾಗವನ್ನೊಳಗೊಂಡ ವೇದದ ಹಲವು ಸೂಕ್ತಗಳನ್ನು ಉಪನಿಷತ್ತುಗಳು ಬಳಸಿ ಕೊಂಡಿವೆ ಮತ್ತು ಅವುಕೂಡ ಪ್ರಮಾಣ ಗಳಾಗಿವೆ. ಇದು 'ಅಶ್ರೌತ' ಅಥವ 'ಸ್ವತಂತ್ರ' ಆಗಮ ಪ್ರಮಾಣವಾಗಿದೆ ಎಂಬ ಹೊಸವಿಚಾರವನ್ನೆತ್ತಿ ತೋರಿಸುತ್ತದೆ.

' ಅಶ್ರೌತ ' ಪದದ ಇಲ್ಲವೆ ' ಸ್ವತಂತ್ರ ' ಪದದ ಅರ್ಥಛಾಯೆಯಂತೆ ಪ್ರಮಾಣವು ಕೂಡ ಆಗಿರುವದೆಂಬದು ಅಶ್ರೌತಾಗಮದ ವೈಶಿಷ್ಟ್ಯ. ಹೀಗೆ ಆಗಮ ಪದ ಬಳಸುವಾಗ ಆಗಮವೆಂದರೆ ಶಿವಾಗಮ ಮತ್ತು ವೇದ ಎಂಬರಡೂ ಅರ್ಥಗಳು ಆಗಮ ಪದಕ್ಕಿರುವವೆಂಬುದಿಲ್ಲಿ ಸ್ಮರಣಾರ್ಹ. ಅದೇ ರೀತಿ ವೇದವೆಂಬ ಪದಕ್ಕೆ ಶ್ರುತಿಯೆಂಬ ಅರ್ಥವಿದ್ದು ಅದು ಮಂತ್ರ ಮತ್ತು ಬ್ರಾಹ್ಮಣಗಳ ಶಬ್ದರಾಶಿ

೭೫. ಶ್ರೀಶಂಭುಲಿಂಗ ಶಿವಾಚಾರ್ಯ, ಆಗಮ ಪರಿಜ್ಞಾನ. ಪು. ೩೦. ವಿಜಾಪುರ (೧೯೩೦)

ಯಾಗಿದ್ದು ಪ್ರಮಾಣವಾಗಿರುವುದು ಸುಪ್ರಸಿದ್ಧ. ಇದೇ ಶಬ್ದ ಪ್ರಮಾಣ, ಆಪ್ತ ವಾಕ್ಯ ಪ್ರಮಾಣ. 'ಶ್ರೌತಾಗಮ' 'ಅಶ್ರೌತಾಗಮ' ಎಂಬ ಪದಗಳು ವಿರುದ್ಧಾರ್ಥ ಕೊಡುವವೆಂಬುದು ತೋರಿಕೆಗೆ ಸ್ಪಷ್ಟವಿದ್ದರೂ 'ಅಶ್ರೌತಾಗಮ' ವೆಂದರೆ ಹೀನಾಚಾರತಿಳಿಸುವ ಶಬ್ದಪ್ರಮಾಣವಾಗಿರದೆ 'ವೈದಿಕ' ಆಚಾರದಿಂದ ಉಪರಿ ಉತ್ತಮತಮ ಆಚಾರವೆಂಬರ್ಥವಿರುವದರಿಂದ ಸದಾಚಾರ ಶಬ್ಧ ಪ್ರಮಾಣವಾಗಿದೆ. ವೈದಿಕ ಧಾರ್ಮಿಕ ಆಚಾರ ಮತ್ತು ಕರ್ಮಗಳಿಗಿಂತ ಉಪರಿ ಧಾರ್ಮಿಕ ಆಚಾರ ಹಾಗೂ ಕರ್ಮಗಳನ್ನು ಅಶ್ರೌತಾಗಮದಲ್ಲಿ ನೋಡುತ್ತೇವೆ. ೨೮ ದಿವ್ಯಾಗಮಂಗಳ ಸಂದರ್ಭದಲ್ಲಿ ಅಶ್ರೌತಾಗತಮದ ಧರ್ಮಾಚಾರ ಮತ್ತು ಸದಾಚಾರ (Ethical behavior) ಗಳ ಅರ್ಥಛಾಯೆ ಭಿನ್ನವಾಗಿರುವುದು ಅತ್ಯಂತ ಅವಶ್ಯವಿದೆ. ಇಲ್ಲವಾದರೆ ರಂ. ರಾ. ದಿವಾಕರರಂತೆ ಅಶ್ರೌತಾಗಮ ಅಥವ ಸ್ವತಂತ್ರಾಗಮದ ಬಗ್ಗೆ ಶಂಕಾತ್ಮಕರಾಗ ಬೇಕಾಗುತ್ತದೆ.

ಈ ಅರ್ಥಛಾಯೆ ಉಪನಿಷತ್ತುಗಳ ಪೂರ್ವಕಾಲದಿಂದಲೂ ಜನರಿಗೆ ಗೊತ್ತಿತ್ತು. ಅದೊಂದು ಕೂಡ ವೈದಿಕದಂತೆ ಉತ್ತಮ ಪರಂಪರೆಯಾಗಿ ಬೆಳೆದು ಕೊಂಡು ಬಂದಿದೆ. ಆದ್ದರಿಂದ ವೈದಿಕ ಧರ್ಮದ ವರ್ಣಾಶ್ರಮಧರ್ಮದಿಂದ ಭಿನ್ನವಾದ ಅತ್ಯಾಶ್ರಮ ಅಥವ ಅತಿವರ್ಣಾಶ್ರ ಧರ್ಮವು ಅನಾದಿಕಾಲದಿಂದ ಅಸ್ತಿತ್ವದಲ್ಲಿದೆ, ಅದು, ಭಾರತೀಯ ಸನಾತನ ಆಚಾರ ವಿಚಾರಗಳಲ್ಲಿ ವರ್ಣಾಶ್ರಮಧರ್ಮದಿಂದಾಗಿ ಮೌಢ್ಯ, ಅಂಧಾನುಕರಣಗಳು ಬೆಳೆದು ನಿಂತಾಗ, ವಜ್ರಾಯುಧದಂಥ ಪ್ರಖರ, ನೇರ ವೈಚಾರಿಕತೆಯಿಂದ ಆ ಮೌಢ್ಯ ಹಾಗೂ ಅಂಧಾನುಕರಣತೆಗಳನ್ನು ಕೊಚ್ಚಿ ಹಾಕಿದೆ, ಭಾರತೀಯತೆಯ ತನ್ನತನವನ್ನು ಉಳಿಸಿ ಬೆಳಿಸಿಕೊಂಡು ಬಂದಿದೆ. ಆಗಮ ಸಾಹಿತ್ಯದ ಆಶ್ರೌತ ಪರಂಪರೆಯ ಚರಿತ್ರೆಯು ಇಂಥ ಕ್ರಾಂತಿಯನ್ನು ಪ್ರತಿ–ಬಿಂಬಿಸುತ್ತದೆ. ಆಗಮಗಳ ಯುಗವು ಕ್ರಾಂತಿಯ ಯುಗವೆ ಸೈ.[೭೬] ಆದರೆ ಇದು ಬೌದ್ಧಧೋರಣೆಯ ಅಶ್ರೌತದಿಂದ ಬಿನ್ನವಾದ ಅಶ್ರೌತವಾದವೆಂಬ ಎಚ್ಚರಿಕೆಯ ಮಾತನ್ನು ಪುನಾ ಇಲ್ಲಿ ಉಚ್ಚರಿಸಲೇ ಬೇಕಾಗುತ್ತದೆ. ಇಂಥ ಎಚ್ಚರಿಕೆ ಕೊಡಲು ಇರುವ ಕಾರಣ ಬೇರೆ ಇದೆ ಅಲ್ಲವೆ ? ಶ್ರೌತಾಗಮ ಕುರಿತು ಪರಿಶೀಲಿಸುವಾ.

## ಶ್ರೌತಾಗಮ

೨೮ ಶೈವಾಗಮಗಳಲ್ಲಿಯ ಒಂದು ವಿಚಾರ ಆಚಾರ ಪ್ರವಾಹವೆ ಶ್ರೌತಾಗಮವೆಂದು ಪ್ರಸಿದ್ಧ. ಶ್ರೌತಾಗಮವು ತ್ರಯೀಧರ್ಮ ಪ್ರತಿಪಾದಕವಾಗಿರುತ್ತದೆ. ಇದನ್ನು ಪೂರ್ವಮೀಮಾಂಸವೆಂದು ಹೆಸರಿಸಬಹುದು. ಇದು ಕರ್ಮಕಾಂಡವೇ

---

೭೬ The Journal of Karnataka University. Voi, VI p4·(1962)

ಆಗಿದೆ. ಶ್ರೌತಾಗಮ ಪರಂಪರೆಯು–ಕರ್ಮಕಾಂಡ ಪರಂಪರೆಯು–ಆಗಮದ ಪ್ರಭಾವೀ ಪರಂಪರೆಯಾಗಿದೆ. ಈ ಸಾಹಿತ್ಯವು ಲಭ್ಯವಿರುವ ಶೈವಾಗಮಗಳಲ್ಲಿ ಉಂಟು. ವಾತುಲಾಗಮವನ್ನು ಈ ಸಂದರ್ಭದಲ್ಲಿ ಉದ್ಧರಿಸಿ ಖಚಿತ ಪಡಿಸಿಕೊಳ್ಳಬಹುದು.

ಶಿವೇನೋತ್ಪದ್ಯತೇ ಶೈವಸ್ತಸ್ಮಾಜ್ಜಾತಃ ಶಿವದ್ವಿಜಃ ।
ಕಾಮಿಕಾದಿಷು ತನ್ತ್ರೇಷು ಅಷ್ಟಾವಿಂಶತಿಷು ಕ್ರಮಾತ್ ॥೧೪॥

ವೇದ ಶಾಸ್ತ್ರಾದಿ ಸರ್ವೇಷು ಕೃತಾಭ್ಯಾಸಃ ಶಿವವ್ರತೀ ॥
ಕರ್ಷಣಾದಿ ಪ್ರತಿಷ್ಠಾಂತಂ ಪ್ರತಿಷ್ಠಾದ್ಯುತ್ಸವಾನ್ತಕಮ್ ॥೧೫॥

ಉತ್ಸವಾದಿ ಪ್ರಾಯಶ್ಚಿತ್ತಾನ್ತಂ ಜ್ಞಾತ್ವಾಸರ್ವ ಸಮಾಚರೇತ್ ।
ಮನ್ತ್ರಯನ್ತ್ರ ಕ್ರಿಯಾ ಮುದ್ರಾ ನ್ಯಾಸಾವಾಹನ ಕಾದಿಭಿಃ ॥೧೬॥

ಉಪಚಾರೈರ್ಬಹು ವಿಧೈರ್ಲಿಙ್ಗಂ ಸಿಂಹಾಸನೇಯಜೇತ್ ।

ವಾತುಲಾಗಮ. ಪ ೧೦.

ಈ ಆಗಮಭಾಗವು ಸ್ಪಷ್ಟವಾಗಿ ಶಿವಪೂಜೆ ಅಥವ ಲಿಂಗಪೂಜೆಯ ಕರ್ತವ್ಯಕರ್ಮಗಳನ್ನು ವಿಧಿಸುತ್ತದೆ. ಇದು ಸ್ಥಾವರಲಿಂಗಪೂಜೆಯನ್ನು ಕುರಿತು ಹೇಳಿದ ವಿಚಾರವಾಗಿಲ್ಲ. ಅಂದರೆ ಇಷ್ಟಲಿಂಗಪೂಜಾವಿಧಾನಗಳನ್ನು ಕುರಿತು ಇರುತ್ತದೆ. ಇಷ್ಟಲಿಂಗವೆಂದಾಗ ಕೇವಲ ವೀರಶೈವಕ್ಕೆ ಸಂಬಂಧಿಸಿದ ಮಾತೆಂದು ತಿಳಿಯಬೇಕಿಲ್ಲ. ಶುದ್ಧಶೈವವು ಕೂಡ ವೀರಶೈವದಂತೆ ಸ್ಥಾವರಲಿಂಗ ಪೂಜೆಯದಲ್ಲ. ಅದು ಕೂಡ ಇಷ್ಟಲಿಂಗಧಾರಣಪರವಿರುವುದು. ಈ ಮಾತು ಬಹುತೇಕ ವಿದ್ವಾಂಸರ ಗಮನವನ್ನು ಸೆಳೆದಿಲ್ಲ. ಆಗಮಗಳಲ್ಲಿ ಈ ಇಷ್ಟಲಿಂಗಧಾರಣವು ಶುದ್ಧಶೈವರಲ್ಲಿ ಇರುವದು ಪ್ರತಿಪಾದಿತವಾಗಿದೆ. ೭೭ ಶಿವದ್ವಿಜ (ಶಿವಬ್ರಾಹ್ಮಣ) ನು ಇಲ್ಲಿ ಶಿವವ್ರತೀ ಎಂಬ ಪರ್ಯಾಯ ಪದದಿಂದ ಸಂಬೋಧಿತವಾಗಿದ್ದಾನೆ. ಇದು ವರ್ಣಾಶ್ರಮಧರ್ಮದಲ್ಲಿಯಿರುವ ಶಿವದ್ವಿಜನ–ಶಿವಬ್ರಾಹ್ಮಣನ–ಉಲ್ಲೇಖವಾಗಿದೆ. ಆಗಮ ವಿಶಾರದರು ಈ ಬಗ್ಗೆ ಏನು ಹೇಳುವರೊ ನೋಡುವಾ.

---

೭೭ ಈ ವಿಚಾರದ ವಿಶೇಷ ವಿವರಣೆಗಾಗಿ ಡಾ. ವ್ಹಿ. ಎಸ್. ಕಂಬಿ ಅವರ ವೀರಶೈವ ದರ್ಶನ ಮೀಮಾಂಸೆ ಸಂ. ೧. ನ್ನು ನೋಡಿರಿ.

The Saivagamas believe in the efficacy of the caste systems and different stages in life(Varnasramadharma)೭೮. ವೇದ ಮತ್ತು ಆಗಮಗಳು ಅಂದರೆ ಶ್ರೌತಾಗಮವು ಅಭಿನ್ನವಾಗಿವೆ ವಿಚಾರ ಮತ್ತು ಆಚಾರಧರ್ಮದ ದೃಷ್ಟಿಯಿಂದ ಎಂಬುದೇ ಶಿವಭಕ್ತ ತಿರುಮೂಲರ ವಾದವಾಗಿದೆ. ಈ ಮಾತು ಶ್ರೌತಾಗಮದ ವರ್ಣಾಶ್ರಮವನ್ನೆ ಸಮರ್ಥಿಸುತ್ತದೆ. ತೆಲಗು ಕವಿ ಮತ್ತು ದರ್ಶನ ಕೋವಿದನೆಂದು ಪ್ರಸಿದ್ಧಿ ಪಡೆದ ಸೋಮನಾಥನು ವೀರಶೈವ ಪುರಾಣ ಗ್ರಂಥಗಳನ್ನು, ಹಾಗೂ ಭಾಷ್ಯಗಳನ್ನು ಬರೆದಿದ್ದಾನೆ. ಆತನು ತನ್ನ ಚತುರ್ವೇದ ಸಾರನು ಎಂಬ ಗ್ರಂಥದಲ್ಲಿ 'ವೀರಶೈವ ಧರ್ಮದ ವೈದಿಕತ್ವ ವನ್ನು ಅಧಿಕಾರವಾಣಿಯಿಂದ ಸ್ಥಾಪಿಸಿರುವನು.' ೭೯ ಎಂದು ತಿಳಿಸಲಾಗಿದೆ. ಆಗಮವು ತ್ರಯೀಧರ್ಮವಿದ್ಯೆಯಾಗಿದೆಯೆಂದು ಈ ಆಚಾರರ್ಯ ಅಭಿಪ್ರಾಯ. 'ವೀರಶೈವ ಸದಾಚಾರ ಸಂಗ್ರಹ' ಎಂಬ ಗ್ರಂಥವು ಕಾರಣಾಗಮವವನ್ನು ಉದ್ಧರಿಸಿ ಅದು ವೇದಮಂತ್ರಗಳನ್ನು ಉದ್ಧರಿಸಿಕೊಂಡ ವಿಚಾರವನ್ನು ತಿಳಿಸುವದು ಕಂಡು ಬರುತ್ತದೆ. ಈ ಆಗಮವು ವೈದಿಕ ವೆಂಬುದನ್ನು ದೃಢಪಡಿಸುತ್ತದೆ. ಕಾರಣಾಗಮವು ತಾನು ವೇದದಿಂದಲೆ ಹುಟ್ಟಿದೆ, ಅಂದರೆ ಯಜುರ್ವೇದದಿಂದಲೆ ಹುಟ್ಟಿದೆ ಎಂದು ಹೇಳಿಕೊಂಡುದನ್ನು ನೋಡುತ್ತೇವೆ.

ನಿಗಮಾಗಮ ಮಂತ್ರಾರ್ಥ್ಯಮೈಹಿಕಾಮುಷ್ಮಿಕಾರ್ಥದವ್ ।
ಗರ್ಭಾಧಾನೇ ಪುಂಸನೇ ಸೀಮಂತೆ ಜಾತಕರ್ಮಣಿ ॥೩॥
.... .... ....
ದೀಕ್ಷಾಯಾಂ ಚ ಪ್ರತಿಷ್ಠಾಯಾಂನವಗೃಹ ಪ್ರವೇಶನೇ ।
ವಿವಾಹಾ ದೀಕ್ಷಾಸಮಯೇ ಶಿವಾಗ್ನಿ ಜನನೇ ಶುಭೇ ॥೫॥

---

೭೮ "In view of this we see some justification for the statement of the saint Tirumular that" The Vedas with Agamas is the truth: they are the word of Lord; these revelations of the Lord are to be studied as the general and special doctrines, on inquiry they are taken to be different as given rise to two conclusions but to the great ones they are not different." The Journal of the Kamatak University. VII. P. 41 (1963)......

೭೯ ನೋಡಿ ಶಿವಾನುಭವ, ಸಪ್ಟೆಂಬರ್, ೧೯೨೮ ಪು, ೭೪ ಲೇಖಾಂಕ ೨. ವೀರ ಶೈವಧರ್ಮವೂ, ಆಂಧ್ರವಾಙ್ಮಯವೂ. ಲೇಖಕ-ಶಿವತನು,

ವಾಚನೀಯಮಿದಂ ದೇವೀ ಪುಣ್ಯಾಹಂ ಮಂಗಲ ಪ್ರದಮ್ ।
ಯಜುರ್ಮಧ್ಯ ಸಮುತ್ಪನ್ನಂ ಕಾರಣಾಗಮ ಸೂತ್ರಜಮ್ ॥೬॥
ವೀರಶೈವ ಸದಾಚಾರ ಸಂಗ್ರಹ ಸಂ. X.

[ವೇದ ಮತ್ತು ಆಗಮ ಮಂತ್ರಗಳಿಂದ ಪೂರ್ಣವಾದ ಇಹಪರ ಸುಖವನ್ನು ಕೊಡತಕ್ಕಂಥ ಈ ಪುಣ್ಯಾಹ ವಾಚನವು ಗರ್ಭದಾನದಲ್ಲಿ, ಪುಂಸವನದಲ್ಲಿ, ಸೀಮಂತ ದಲ್ಲಿ, ಜಾತಕರ್ಮದಲ್ಲಿ, ನಾಮಕರಣದಲ್ಲಿ, ಆಂದೋಲಿಕಾರೋಹಣದಲ್ಲಿ, ಕರ್ಣಭೇದ, ನಿಷ್ಕ್ರಮಣ, ಅನ್ನಪ್ರಾಶನ, ಚೌಲಿ, ವಿದ್ಯಾರಂಭ, ದೀಕ್ಷಾ, ನೂತನ ಗೃಹಪ್ರವೇಶ, ವಿವಾಹ ಮುಂತಾದ ಸಂಸ್ಕಾರಗಳಲ್ಲಿ ಎಲೈ ಪಾರ್ವತಿಯೆ, ಮಂಗಲಕರವಾದ ಯಜುರ್ವೇದದ ಮಧ್ಯದಲ್ಲಿ ಉತ್ಪನ್ನವಾದ ಕಾರಣಾಗಮದಲ್ಲಿ ಪ್ರಕಟಿತವಾದ ಈ ಪುಣ್ಯಾಹವು ಹೇಳಲ್ಪಡುವುದು.] ಇದೇ ರೀತಿ ಕೆಲವು ವಿಧಿಗಳನ್ನು ವಿಧಿಸಿರುವುದೂ ಉಂಟು. ಅವು ಹೀಗೆ ಇರುತ್ತವೆ.

ಪಾಪಾತ್ಮ ಪಾಷಂಡಕ ವೇದಬಾಹ್ಯಾಃ ಸಂಸ್ಕಾರ ಹೀನಾ ಅಪಿ ಶಾಪದಗ್ಧಾಃ ।
ತೇಷಾಮಿದಂ ಕರ್ಮ ನ ಚೋದಿತಂಮುದಾಶಿವೇನೋದಿತ ಮತ್ರಮಾನಮ್
॥೪೩॥ ವೀರಶೈವ ಸದಾಚಾರ ಸಂ. X.

[ಪಾಪಿಷ್ಠರೂ ಪಾಖಂಡಿಗಳೂ ವೇದವಿರುದ್ಧವಾದ ಆಚರಣೆಯುಳ್ಳವರೂ, ಸಂಸ್ಕಾರ ರಹಿತರಾದವರೂ ಮತ್ತು ಶಾಪದಿಂದ ಭ್ರಷ್ಟರಾದವರೂ ಇಂಥವರೆಲ್ಲರಿಗೂ ಈ ಕ್ರಿಯೆಯು ಹೇಳಲ್ಪಟ್ಟಿರುವದಿಲ್ಲ. ಈ ಮಾತು ಸದಾಶಿವನಿಂದ ಒಳ್ಳೇ ಆನಂದ ದಿಂದ ಹೇಳಲ್ಪಟ್ಟಿತು ][೮೦] ಈ ಪದ್ಯವು ವೈದಿಕ ಆಚಾರ ವಿಚಾರಗಳಿಗೆ ಬೆಲೆಕೊಟ್ಟುದನ್ನು ನೋಡುತ್ತೇವೆ. ಶೌತ್ರಾಗಮದಲ್ಲಿ ವರ್ಣಧರ್ಮ ಮತ್ತು ವರ್ಣಕರ್ಮ ಪರ ವಿವರಣೆ ಇರುವುದಕ್ಕೆ ಲಭ್ಯವಿರುವ ಪಾರಮೇಶ್ವರಾಗಮವು ಸಾಕ್ಷಿಯಾಗಿದೆ.

ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ॥
ಲಿಂಗರುದ್ರಾಕ್ಷ ಭಸ್ಮಾಂಕಾ ಬ್ರಹ್ಮಕರ್ಮ ಸಮಾಶ್ರಿತಾಃ॥
ಶಿವಾಚಾರ ರತಾನಿತ್ಯಂ ಲಿಂಗಪೂಜಾ ಪರಾಯಣಾ ಃ॥
ಶಿವಾರಾಧ್ಯಾಃ ಸದಾ ದೇವೀಮಮಾತಿ ಪ್ರಿಯಕಾರಿಣಃ॥

[ವೀರಶೈವ ಮತಸ್ಥನಾದ ಬ್ರಾಹ್ಮಣನು ಶಿಖೆ, ಯಜ್ಞೋಪವೀತ ಧಾರಕನಾಗಿರುವನು ಲಿಂಗ ರುದ್ರಾಕ್ಷ ಭಸ್ಮಗಳನ್ನು ಧರಿಸಿರುವನು. ಆತನು ಬ್ರಹ್ಮ ಕರ್ಮ ಅಂದರೆ ಯಜ್ಞ

೮೦ – ಪಂ ಬಸವರಾಜ ಶಾಸ್ತ್ರಿ ಪಗಡದಿನ್ನಿ (ಸಂ) ವೀರಶೈವ ಸದಾಚಾರ ಸಂಗ್ರಹ ಪು. X ಮೂರುಸಾವಿರ ಮಠ (೧೯೬೪)

ಯಾಗಾದಿಗಳನ್ನು ಕೃಚ್ಛ್ರಾಯಾದಿ ವ್ರತಗಳನು ಮಾಡುವನು. ನಿತ್ಯಸಮಾಚಾರದಲ್ಲಿ ತೊಡಗಿಕೊಂಡು ಲಿಂಗಪೂಜಾ ಪರಾಯಣನಾಗಿರುವನು. ಈತನು ನನಗೆ ಅತ್ಯಂತ ಪ್ರಿಯನಾಗಿರುವನು.] ಈ ಮಾತುಗಳು ಶ್ರೌತಾಗಮ ಪರವಾದಂಥವು ಎಂಬುದು ಸ್ಪಷ್ಟವಿದೆ. ವೀರಶೈವದಲ್ಲಿ ವರ್ಣಾಶ್ರಮಗಳಿರುವದನ್ನು, ವೀರಶೈವ ಬ್ರಾಹ್ಮಣನು ಶಿಖಾಯಜ್ಞೋಪವೀತಗಳನ್ನು ಧರಿಸಿರುವದನ್ನು, ಯಜ್ಞಯಾಗಾದಿ ಕರ್ಮಗಳ ಆಚರಣೆ ಅವನಿಗೆ ಇರುವುದನ್ನು ಸ್ಪಷ್ಟವಾಗಿ ನಿವೇದಿಸಿರುವುದು ಈ ಮಾತಿಗೆ ಸಾಕ್ಷಿ.

ಆಗಮದ ನಂತರದ ಕಾಲದಲ್ಲಿ ಪ್ರಾಚೀನರು ಶ್ರೌತಾಗಮಪರ ಕಾರಿಕೆಗಳನ್ನು ಬರೆದುದುಂಟು. ಇದು ಅವರ ಪ್ರಾಚೀಲತ್ಯಕ್ಕೆ ಸಾಕ್ಷಿಯಾಗಿದೆ. ಶ್ರೀ ಶಂಭುಲಿಂಗ ಶಿವಾಚಾರ್ಯರು ಆಗಮ ಪರಿಜ್ಞಾನ[೧] ಎಂಬ ಗ್ರಂಥದಲ್ಲಿ ಅಂಥ ಒಂದು ಉದಾಹರಣೆಯನ್ನು ಎತ್ತಿಕೊಟ್ಟಿರುವುದು ಇಂತಿದೆ-

ಶ್ರೀ ಭಾರ್ಗವ (ಭರ್ಗಶಿಖೆಯೆಂಬ ಆಗಮಶಾಖೆಯ) ವಾಕ್ಯಾನುಸಾರ ಶಿವಾಗಮಗಳಲ್ಲಿ ವರ್ಣಾಶ್ರಮಾಚಾರ ಕ್ರಮವು ಬೋಧಿಸಲ್ಪಡುವದೆಂದೇ ಸಿದ್ಧವಾಗುವುದು. ಶ್ರೀ ಸದ್ಯೋಜ್ಯೋತಿ ಶಿವಾಚಾರ್ಯರು ಮೋಕ್ಷಕಾರಿಕೆಯಲ್ಲಿ-

ನ ಚ ಸ್ವರ್ಗೋ ಚರೇ ತಾಸಾಂ ಬಾಧತೇ ತತ್ ಪ್ರಮಾಣವತ್॥
ತಾಸು ವರ್ಣಾಶ್ರಮಾಚಾರಾನಭ್ಯನು ಜ್ಞಾತವಚ್ಚ ತತ್ ॥೧೪೫॥
ನಾಚಾನ್ಯೇನ ಪ್ರಮಾಣೇನ ಸಂರುದ್ಧಸ್ತಸ್ಯ ಗೋಚರಃ ।
ಶ್ರೋತ್ರಿಯೈರಪ್ಯತೋಗ್ರಾಹ್ಯಂ ತತ್ಫಲಾಧಿಕ ಸಾಧನಂ ॥೧೪೬॥

ಎಂಬೀ ವಾಕ್ಯಗಳಿಂದ ವೈದಿಕೀ ಶ್ರುತಿಗಳಲ್ಲಿ ವರ್ಣಾಶ್ರಮಾಚಾರ ಕ್ರಮವು ವಿಧಿಸಲ್ಪಡುವಂತೆ ತಾಂತ್ರಿಕೀ ಶ್ರುತಿಗಳಲ್ಲಿಯೂ ವರ್ಣಾಶ್ರಮಾಚಾರದ ಕಟ್ಟಳೆ ಇರುವದಾದ ಕಾರಣ, ವೇದಗಳಂತೆ ಆಗಮಗಳಾದರೂ ಅಬಾಧಿತ ಪ್ರಮಾಣರೂಪಗಳಾಗಿರುವುದರಿಂದ ಶಿವಾಗಮ ಸಮುದಾಯರೂಪ ಸಿದ್ಧಾಂತ ಶಾಸ್ತ್ರವು ಶ್ರೋತ್ರೀಯರಿಂದ ಗ್ರಹಿಸಲ್ಪಡತಕ್ಕದ್ದಾಗಿರುವುದೆಂಬ ಆಶಯವನ್ನು ವ್ಯಕ್ತ ಪಡಿಸಿದ್ದಾರೆ. ಈ ಮಾತುಗಳಲ್ಲಿ ಪ್ರಸ್ತುತ ಸಂಬಂಧದಲ್ಲಿ ಅತ್ಯಂತ ಪರಿಗಮನೀಯ ವಿಚಾರವೆಂದರೆ 'ವೈದಿಕೀ ಶ್ರುತಿಯಲ್ಲಿ ವರ್ಣಾಶ್ರಮಾಚಾರಕ್ರಮವು ವಿಧಿಸಲ್ಪಡುವಂತೆ ತಾಂತ್ರಿಕೀ ಶ್ರುತಿಗಳಲ್ಲಿಯೂ ವರ್ಣಾಶ್ರಮಾಚಾರದ ಕಟ್ಟಳೆ ಇರುವುದು' ಎಂಬುದು. ಇದು ತಾಂತ್ರಿಕೀ ಶ್ರುತಿ

---

೮೧ - ಶ್ರೀ. ಶಂಭುಲಿಂಗ ಶಿವಾಚಾರ್ಯ. ಆಗಮ ಪರಿಜ್ಞಾನ. ಪು ೩೫ ಪಂಚಾಚಾರ್ಯ ಇಲೆಕ್ಟ್ರಿಕಲ್ ಪ್ರೆಸ್ ಮೈಸೂರು (೧೯೩೦)

ಅಥವ ಆಗಮಿಕ ಶ್ರುತಿಯು ಶ್ರೌತವೆಂಬುದನ್ನು ತಿಳಿಸುವುದು. ಅದೇ ರೀತಿ ವಿದ್ವಾಂಸರು ಶ್ರೌತಾಗಮ ವಿಚಾರದಲ್ಲಿ ಮತ್ತು ಅದನ್ನು ವಿದ್ಯಾವಂತರ ವರ್ಗದಲ್ಲಿ ಜನಪ್ರಿಯ ಗೊಳಿಸುವುದರಲ್ಲಿ ಆಸಕ್ತಿಯುಳ್ಳವರೆಂದು ಸೂಚಿಸುತ್ತದೆ. ಶ್ರೌತಾಗಮ ಪರಿಣತರನ್ನು ಅಂದಿನ ಸಮಾಜವು ಗೌರವಿಸುತ್ತಿತ್ತು ಎಂಬುದನ್ನು ಈ ಕೃತಿಯು ಸೂಚಿಸುವಂತೆ, ಶ್ರೌತಾಗಮದ ಪ್ರಭಾವವು ಆಕಾಲದಲ್ಲಿ ಹೆಚ್ಚಾಗಿದ್ದುದು ಕೂಡ ತಿಳಿ ಯುತ್ತದೆ. ಶ್ರೌತಾಗಮಕ್ಕೆ ಭಾಷ್ಯಗಳನ್ನು ಕಾರಿಕೆಗಳನ್ನು ಬರೆದಂತೆ ಅಶ್ರೌತಾಗಮ ಕುರಿತಾದ ಭಾಷ್ಯಗಳು ಅಥವಾ ಕಾರಿಕೆಗಳು ಸಧ್ಯಲಭ್ಯವಿದ್ದಂತಿಲ್ಲ. ಇನ್ನೊಬ್ಬ ಘನ ವಿದ್ವಾಂಸರಾದ ಅಘೋರ ಶಿವಾಚಾರ್ಯರು ಕೂಡ ಇವೇ ಮಾತುಗಳನ್ನು ಪುಷ್ಟೀಕರಿಸುವದನ್ನು ನೋಡಬಹುದು. ಅವರು ಮೃಗೇಂದ್ರಾಗಮದ ವಿದ್ಯಾ ಪಾದದ ಪ್ರಥಮ ಶ್ಲೋಕವನ್ನುದ್ಧರಿಸಿ ವೃತ್ತಿದೀಪಿಕೆಯನ್ನು ಬರೆದದ್ದು ಗಮನಿಸ ಬೇಕಾದ ಭಾಗವಾಗಿದೆ.

ಇತಿ ವರ್ಣಾಶ್ರಮಾಚಾರಾನ್ ಮನಸಾಪಿ ನ ಲಂಘಯೇತ್ ।
ಯೋ ಅಸ್ಮಿನ್ ಆಶ್ರಮೇತಿಷ್ಠನ್ ಪ್ರಾಪ್ತೋ ದೀಕ್ಷಾಂ ಶಿವಾತ್ಮಿಕಮ್ ॥
ತಸ್ಮಿನ್ ಏವ ಸಂತಿಷ್ಠೇತ್ ಶಿವಧರ್ಮಂ ಚ ಪಾಲಯೇತ್ ॥

ವೇದಗಳನ್ನೂ ಸದಾಗಮಗಳನ್ನೂ ಒಪ್ಪುವಾತನು ತತ್ಪ್ರತಿಪಾದ್ಯಗಳಾದ ವರ್ಣಾ ಶ್ರಮಗಳನ್ನು ಎಂದೂ ಉಲ್ಲಂಘಿಸನು. ವೈದಿಕೀ ಶ್ರುತಿಯು ವರ್ಣಾಶ್ರಮಗಳ ಆಚಾರ ಕ್ರಮವನ್ನು ವಿಧಿಸುವಂತೆ, ತಾಂತ್ರಿಕೀ ಶ್ರುತಿ ಎನಿಸುವ ಸಿದ್ಧಾಂತಾಗಮ ವೃಂದವಾದರೂ ವಿಧಿಸುವುದು." ಇದು ವೃತ್ತಿದೀಪಿಕೆಯು ತಿಳಿಸುವ ವಿಚಾರ. ಅಘೋರ ಶಿವಾಚಾರ್ಯರು ಕೂಡ ಆಗಮಗಳಲ್ಲಿ ವರ್ಣಾಶ್ರಮಧರ್ಮವು ಪ್ರತಿಪಾದಿತ ವಾಗಿರುವದನ್ನು ತಿಳಿಸಿದ್ದಾರೆ. ಆದ್ದರಿಂದ ಇದು ಶ್ರೌತಾಗಮವಾಗಿದೆ.

ಅಪ್ಪಯ್ಯ ದೀಕ್ಷಿತನೆಂಬ ಘನ ವಿದ್ವಾಂಸನು 'ಶಿವತತ್ತ್ವ ವಿವೇಕ (ಪು. ೧೧೯) "ವೇದಾರ್ಥ ಸಾರಸಂಗ್ರಹಾತ್ಮಕಾ ನಾಂ ಕ್ವಚಿದಪಿ ದೋಷ ಶಂಕಾಕಲುಷರಹಿತಾನಾಂ ಶೈವಾಗಮಾನಾಮೇವ ಸರ್ವಾಗಮೇಭ್ಯೋ ಬಲವತ್ತ್ವ ವ್ಯವಸ್ಥಿತೇಃ"ವೇದಗಳಲ್ಲಿ ಸಾರ (ಮುಖ್ಯ) ವಾದ ಅರ್ಥವೆಂಬುದೇನುಂಟೋ, ಅದನ್ನೇ ಸಕ್ರಮವಾಗಿಯೂ ಸುಸ್ಪ ಷ್ಟವಾಗಿಯೂ ಹೇಳತಕ್ಕವುಗಳೂ, ಸ್ವಲ್ಪವಾದರೂ ದೋಷವಿಲ್ಲದವುಗಳೂ, ಯಾವ ವಿಧವಾದ ಸಂಶಯಕ್ಕಾಸ್ಪದವಲ್ಲದವುಗಳೂ, ಪವಿತ್ರಗಳೂ ಆದ ಶೈವಾಗಮಗಳಿಗೆ ಪಾಂಚರಾತ್ರಾಗಮಗಳಿಗಿಂತಲೂ ಬಲವತ್ತರವಾದ ಪ್ರಾಮಾಣ್ಯವಿದೆ ಎಂದು ಅಪ್ಪಯ್ಯ ದೀಕ್ಷಿತನು ಪ್ರಾಕೃತರನ್ನು ಕಣ್ದೆರೆವಂತೆ ಕೂಗಿ ಎಚ್ಚರಿಸಿದ್ದಾನೆ.[೮೨]

೮೨ ಶ್ರೀ ಶಂಭುಲಿಂಗ ಶಿವಾಚಾರ್ಯ. ಆಗಮ ಪರಿಜ್ಞಾನ. ಪು. ೩೭. ೩೮. ಪಂಚಾಚಾರ, ಇಲೆಕ್ಟ್ರಿಕಲ್ ಪ್ರೆಸ್ ಮೈಸೂರ. (೧೯೩೦)

ಕೂಡ ೨೮ ಶೈವಾಗಮಗಳು ವೇದದಲ್ಲಿ ಪ್ರತಿಪಾದಿತವಾದ ವರ್ಣಾಶ್ರಮ ಧರ್ಮವನ್ನು ಮತ್ತು ಅದಕ್ಕೆ ಪೋಷಕವಾದ ವಿಧಿ ವಿಧಾನಗಳನ್ನು ಸಕ್ರಮವಾಗಿ ಬೋಧಿಸುವವೆಂಬ ವಿಚಾರವನ್ನು ತಿಳಿಸುವುದು ಶ್ರೌತಾಗಮದ ಲಕ್ಷಣಗಳೇ ಆಗಿವೆ. ಹೀಗೆ ಶ್ರೌತಾಗಮವು ಪೂರ್ವಕಾಲದಲ್ಲಿ ಅತ್ಯಂತ ಪ್ರಭಾವೀ ಸಾಹಿತ್ಯವಾಗಿತ್ತೆಂಬ ಮಾತು ಸ್ಪಷ್ಟವಾಗಲು ಈ ಮೊದಲು ಉದ್ಧರಿಸಿದ ಆಗಮಭಾಗಗಳು, ವೃತ್ತಿದೀಪಿಕೆ, ಶಿವತತ್ತ್ವ ವಿವೇಕವೆಂಬ ಗ್ರಂಥಗಳು ಸಾಕ್ಷಿಗಳಾಗಿವೆ.

## ಅಶ್ರೌತಾಗಮ

ಇಲ್ಲಿಯವರೆಗೆ ಶ್ರೌತಾಗಮದ ವಿಚಾರವನ್ನು ಮಾಡಲಾಯಿತು. ಈಗ ಅಶ್ರೌತಾಗಮದ ವಿಚಾರದ ಬಗ್ಗೆ ಆಗಮಗಳು ಏನು ತಿಳಿಸುತ್ತವೆ ಎಂಬುದನ್ನು ನೋಡುವಾ. ಇದರಿಂದ ಅಶ್ರೌತಾಗಮದ ಲಕ್ಷಣ ಕುರಿತು ಅತ್ಯಂತ ನಿಕರದ ಅಭಿಪ್ರಾಯವು ತಿಳಿಯುತ್ತದೆ. ಇಪ್ಪತ್ತೆಂಟು ದಿವ್ಯಾಗಮಗಳಲ್ಲಿ ಒಂದಾದ ಚಂದ್ರಜ್ಞಾನಾಗಮವು ಈ ವಿಚಾರದಲ್ಲಿ ಹೇಳಿದ್ದು ಇಂತಿದೆ–

ವೀರಶೈವ ಪ್ರವಕ್ಷ್ಯಾಮಿ ವಿದಿತಂ ಶ್ರುತಿ ತಂತ್ರಯೋಃ।
ಶ್ರೌತಂ ಸ್ವತಂತ್ರಮಿತಿ ಚ ದ್ವಿವಿಧಂ ಪರಿಕೀರ್ತಿತಂ ।।೩೧।।
ವರ್ಣಾಶ್ರಮೀಯ ಧರ್ಮಾಢ್ಯಂ ಶ್ರೌತಮಿತ್ಯಭಿಧೀಯತೇ।
ತದೀಯ ಧರ್ಮರಹಿತಂ ಸ್ವತಂತ್ರಮಿತಿ ಕಥ್ಯತೇ ।।೩೧।।

ಚಂ. ಆ; ಪು. ೩೬. ೩೨.

ಚಂದ್ರಜ್ಞಾನಾಗಮವು ವೇದೋಪನಿಷತ್ತುಗಳಲ್ಲಿ ಹುಟ್ಟಿ ಬೆಳೆದ ವಿವಿಧರೂಪ ತಳೆದ ಅಶ್ರೌತದ ಪರಿಜ್ಞಾನವುಳ್ಳುದೆಂದು ಕಂಡು ಬರುತ್ತದೆ. ಆದ್ದರಿಂದ ಶ್ರೌತ ಆಗಮ ಅಂದರೇನು, ಎಂಬುದನ್ನು ವ್ಯಾಖ್ಯಾನಿಸುತ್ತದೆ ಅತ್ಯಂತ ಸ್ಪಷ್ಟ ಶಬ್ದಗಳಲ್ಲಿ. ಶ್ರೌತವು ಶ್ರುತಿ ಸಾರಮಯ ಅಂದರೆ ವೇದದ ವರ್ಣಧರ್ಮ ಮತ್ತು ವರ್ಣ ಕರ್ಮಗಳ ವಿಜ್ಞಾನವಾಗಿರುವದು. ಅದೇ ರೀತಿ ಅಶ್ರೌತವು ಅಂದರೆ ಸ್ವತಂತ್ರವು ಈ ವರ್ಣಧರ್ಮ ಮತ್ತು ವರ್ಣಧರ್ಮಕರ್ಮಗಳಿಲ್ಲದ ವಿಜ್ಞಾನವಾಗಿದೆ. ಇಲ್ಲಿ ಕೇವಲ ವೀರಶೈವದ ಶ್ರೌತ ಮತ್ತು ಅಶ್ರೌತಗಳನ್ನು ತಿಳಿಸಿದ್ದು ವಿಶೇಷ. ಇತರೇ ಶೈವಭೇದಗಳಲ್ಲಿಯೂ ಈ ಬಗೆಯ ಶ್ರೌತ ಮತ್ತು ಅಶ್ರೌತಗಳ ವಿಚಾರವಿರು ವಬಗ್ಗೆ ಸಧ್ಯ ಲಭ್ಯವಿರುವ ಆಗಮ ಭಾಗಗಳಲ್ಲಿ ಯಾವ ಮಾಹಿತಿಯೂ ದೊರೆಯು ವದಿಲ್ಲ. ಆದ್ದರಿಂದ ಆಗಮಗಳಲ್ಲಿ ತಿಳಿಸಲಾದಂತೆ ವೀರಶೈವವನ್ನೇ ಶ್ರೌತಾಶ್ರೌತ ವಿಚಾರದ ಅರ್ಥಮಾಡಿಕೊಳ್ಳಲು ತಗೆದುಕೊಳ್ಳಬೇಕಾಗಿರುವುದು ಅನಿವಾರ್ಯವಾಗಿ ರುತ್ತದೆ. ಚಂದ್ರ ಜ್ಞಾನಾಗಮದ ವಿವರಣೆಯನ್ನು ನೋಡಿದರೆ ಅಶ್ರೌತವೀರಶೈವ

ದೃಷ್ಟಿಯು ಉಪನಿಷತ್ತಿನ ದೃಷ್ಟಿಯಂತೆಯೆ ಇರುತ್ತದೆ. ಅಂದರೆ ವೀರಶೈವದ ಅಶ್ರೌತಾಗಮವು ವರ್ಣಧರ್ಮ ಹಾಗೂ ಕರ್ಮಗಳನ್ನು ಒಪ್ಪುವದಿಲ್ಲವೆಂಬ ಮಾತಿಗೆ ಉಪನಿಷತ್ತಿನ ಅತ್ಯಾಶ್ರಮವನ್ನೆ ಹೋಲುತ್ತದೆ. ಉಪನಿಷದ್ಯುಗದ ದೃಷ್ಟಿ ಕೋನದ ವ್ಯಾಪಕವಾದ ಅನುಷ್ಠಾನವನ್ನು ಆಗಮಗಳ ಯುಗದಲ್ಲಿ ನೋಡುತ್ತೇವೆ. ಉಪನಿಷತ್ತಿನ ಅಶ್ರೌತ ಪರಂಪರೆ ದೃಢವಾಗಿ ಮತ್ತು ಬಲವಾಗಿ ಧರ್ಮಸ್ವರೂಪ ಪಡೆದು ಅಸಂಖ್ಯಾತ ಅನುಯಾಯಿಗಳನ್ನು ಪಡೆದದು ಆಗಮಯುಗದಲ್ಲಿಯೆ. ಅನೇಕ ಸಂಸ್ಕೃತಿಗಳೊಡನೆ ಸಂಘರ್ಷಣೆಯಲ್ಲಿ ತೊಡಗಿದ ಭಾರತೀಯ ಧರ್ಮ ಪ್ರವಾಹವು ಅವುಗಳನ್ನೆಲ್ಲ ತನ್ನ ಜಾತ್ಯತೀತ ಧೋರಣೆಯ ತೊಳತೆಕ್ಕೆಯಲ್ಲಿ ತೆಗೆದುಕೊಂಡು ತನ್ನವನ್ನಾಗಿ ಮಾಡಿಕೊಂಡುದು ಆಗಮಗಳ ಯುಗದಲ್ಲಿಯೆ ಎಂಬುದನ್ನು ವಿದ್ವಾಂಸರು ಗುರುತಿಸಿದ್ದಿಲ್ಲಿ ಸ್ಮರಣಾರ್ಹ. ಅಶ್ರೌತಾಗಮವು ಅತ್ಯಂತ ಕ್ರಾಂತಿ ಕಾರಕವಾಗಿರುತ್ತದೆ ಎಂಬುದಕ್ಕೆ ಭಾರತೀಯ ಸಂಸ್ಕೃತಿಯ ಚರಿತ್ರೆಯೇ ಸಾಕ್ಷಿ.

ಭಾಷ್ಯಕಾರರಲ್ಲಿ ಅಂದರೆ ಬ್ರಹ್ಮಸೂತ್ರ ಭಾಷ್ಯಕಾರರಲ್ಲಿ ಒಬ್ಬರಾದ ಶ್ರೀಪತಿ ಪಂಡಿತಾರಾಧ್ಯರು ಕೂಡ ಚಂದ್ರಜ್ಞಾನಾಗಮದ ವಿಚಾರವನ್ನು ಪುರಸ್ಕರಿಸುತ್ತಾರೆ ಸಿದ್ಧಾಂತಾಗಮವನ್ನು ಉದ್ಧರಿಸುತ್ತ.

'ಶೌತಾಶ್ರೌತ ವಿಭೇದೇನ ತದ್ ದ್ವಿವಿಧಾ ಪರಿಚಕ್ಷಸೇ'

ಇದೇ ವಿಚಾರ ಧೋರಣೆಯನ್ನು ಮಕುಟಾಗಮದಲ್ಲಿ ನೋಡುತ್ತೇವೆ. ಅದು ಹೀಗೆ ತಿಳಿಸುತ್ತದೆ.

ವೈದಿಕಂ ತಾಂತ್ರಿಕಂ ಚೇತಿ ವ್ರತಮೇತದ್ದ್ವಿಧಾ ಭವೇತ್ ।
ದ್ವಿಜಾನಾಂ ವೈದಿಕಂ ಪ್ರೋಕ್ತಮನ್ಯೇಷಾಂ ತಾಂತ್ರಿಕಂ ಸ್ಮೃತಂ ॥

ಮಕುಟ. ಪ. ೨. ಶ್ಲೋ ೩೫.

ಇಲ್ಲಿ ಬರುವ ವೈದಿಕ ಮತ್ತು ತಾಂತ್ರಿಕ ಆಚಾರ ಅಥವ ವ್ರತವು ಎರಡಾಗಿರುವದು ತಿಳಿದು ಬರುವಂತೆ ವರ್ಣಾಶ್ರಮನಿಷ್ಠರಾದ ದ್ವಿಜರು ವೈದಿಕಾಗಮವನ್ನು ಅಧ್ಯಯನ ಮಾಡಬೇಕು, ವೈದಿಕವಲ್ಲದ ಅಂದರೆ ವೇದಕರ್ಮಾದಿಗಳನ್ನು ಒಪ್ಪದ ತಾಂತ್ರಿಕ ಆಗಮವನ್ನು ವೈದಿಕಕ್ಕಿಂತ ಅನ್ಯ ಅಥವ ಭಿನ್ನವಾದಂಥ ವ್ರತಾದಿಗಳನ್ನು ಪಾಲಿಸಬೇಕನ್ನುವವರು ಅನುಸರಿಸಬೇಕು. ಈ ವಿಚಾರವಾದವು ಶ್ರೌತಾಗಮ ಮತ್ತು ಅಶ್ರೌತಾಗಮ ಎಂಬ ಭೇದಗಳ ವಿಚಾರವಾದವೇ ಆಗಿರುತ್ತದೆ. ವೈದಿಕ ಆಗಮವು (ಶ್ರೌತಾಗಮವು) ತಾಂತ್ರಿಕ (ಅಶ್ರೌತ) ಆಗಮವನ್ನು ಹೀನಾಯಮಾನ ಧ್ವನಿಪೂರ್ಣವಾಗಿ ತಿಳಿಸುವುದು ಗೊತ್ತಾಗುತ್ತದೆ. ಇದು ಒಂದು ಅರ್ಥದಲ್ಲಿ ತಾಂತ್ರಿಕ ಅಥವ ಅಶ್ರೌತಾಗಮವನ್ನು ಹತ್ತಿಕ್ಕುವ ತಂತ್ರವೇ ಆಗಿದೆ,

ಶ್ರೌತಾಗಮವು ಅಶ್ರೌತಾಗಮವನ್ನು ದೂರಕ್ಕೆ ತಳ್ಳಿದ್ದನ್ನು ಕಂಡುಕೊಳ್ಳಲು ಈ ವಿದ್ವಾಂಸನ ಇಂಥ ಮಾತುಗಳು ತುಂಬಾ ನೆರವಾಗುತ್ತವೆಯೆಂದೇ ಹೇಳಬೇಕು. ಈ ವಾದವನ್ನು ಇನ್ನೂ ಅನೇಕ ವಿದ್ವಾಂಸರ ಕೃತಿಗಳಲ್ಲಿ ಗುರುತಿಸಬಹುದು.

ಶ್ರೀಕಂಠ ಶಿವಾಚಾರ್ಯರೆಂಬ ಪ್ರಾಚೀನ ವಿದ್ವಾಂಸರು ಬ್ರಹ್ಮಸೂತ್ರಗಳ ಮೇಲೆ ಭಾಷ್ಯವನ್ನು ಬರೆದಿದ್ದಾರೆ. ಈ ಭಾಷ್ಯವು ಶ್ರೌತಾಗಮ ಪರವಿರುವುದು. ಅದರಂತೆ ಇವರ ನಂತರದ ಭಾಷ್ಯಕಾರರಾದ ಶ್ರೀಪತಿ ಪಂಡಿತಾರಾಧ್ಯರು ಬ್ರಹ್ಮ ಸೂತ್ರಗಳಿಗೆ ಭಾಷ್ಯವನ್ನು ಬರೆದಿದ್ದಾರೆ. ಇವರೂ ಕೂಡ ತಮ್ಮ ಭಾಷ್ಯವನ್ನು ಶ್ರೌತಾಗಮ ಪರವಾಗಿಯೇ ಬರೆದಿದ್ದಾರೆ. ಇವರ ಪಾಂಡಿತ್ಯ ಪರಂಪರೆಗೆ ಸೇರಿದ ನೀಲಕಂಠ ಶಿವಾಚಾರ್ಯರು ಶ್ರೀಕಂಠ ಶಿವಾಚಾರ್ಯರ ಬ್ರಹ್ಮಸೂತ್ರ ಭಾಷ್ಯಕ್ಕೆ 'ಕ್ರಿಯಾಸಾರ'ವೆಂಬ ಕಾರಿಕಾ ಗ್ರಂಥವನ್ನು ಬರೆದಿದ್ದಾರೆ. ಅದೂ ಕೂಡ ಸ್ವಾಭಾವಿಕವಾಗಿ ಶ್ರೌತಾಗಮಪರವೇ ಇರುತ್ತದೆ. ಕ್ರಿ. ಶ. ೯ನೆಯ ಶತಮಾನದಲ್ಲಿದ್ದ ಶ್ರೀಕಂಠ ಶಿವಾಚಾರ್ಯರು ಆಂಧ್ರ ದೇಶದವರು. ಅವರು ಅಲ್ಲಿ ತುಂಬಾ ಪ್ರಚಲಿತ ವಿದ್ದ ಶ್ರೌತವೀರಶೈವ ಅನುಯಾಯಿಗಳು. ಅವರು ಶ್ರೌತವೀರಶೈವಪರ ಭಾಷ್ಯ ವನ್ನು ಬರೆದದ್ದು ಸಹಜವೆ. ಆದರೆ ಕ್ರಿ. ಶ. ಹದಿನೇಳನೆಯ ಶತಮಾನದವರಾದ ಶಿವಮೊಗ್ಗಾ ಜಿಲ್ಲೆಗೆ ಸೇರಿದ ಕೆಳದಿಯ ರಾಜಗುರುವಂಶಸ್ಥರಾದ ನೀಲಕಂಠ ಶಿವಾಚಾರ್ಯರು ಅಶ್ರೌತವೀರಶೈವದ ಪ್ರಭಾವದ ನಾಡಿನಲ್ಲಿದ್ದರೂ ಕೂಡ ಶ್ರೌತ ವೀರಶೈವವನ್ನು ಮೆಚ್ಚಿಕೊಂಡವರು. ಅದರ ಅನುಯಾಯಿಗಳು. ಶ್ರೌತವೀರಶೈವ ಪರವಿದ್ದ ಶ್ರೀಕಂಠ ಶಿವಾಚಾರ್ಯರ ಬ್ರಹ್ಮಸೂತ್ರ ಭಾಷ್ಯಕ್ಕೆ ಶ್ರೌತಾಗಮಪರ ಕಾರಿಕೆ ಬರೆದದ್ದು ಅಚ್ಚರಿಯ ಮಾತಲ್ಲ. ಶ್ರೀಕಂಠ ಶಿವಾಚಾರ್ಯರು ತಮ್ಮ ಬ್ರಹಸೂತ್ರ ಭಾಷ್ಯದಲ್ಲಿ ವೈದಿಕ ಆಗಮ ಮತ್ತು ವೈದಿಕ ಆಗಮ ವಿರೋಧಿಸುವ ಅವೈದಿಕ (ಅಶ್ರೌತ ಅಥವ ಸ್ವತಂತ್ರ) ಆಗಮ ಎಂಬ ಭೇದಗಳು ಗೊತ್ತಿದ್ದ ಸಂಗತಿಯನ್ನು ಅವರು ತಿಳಿಸಿದ್ದನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ಅಂದರೆ ಯಾರು ಈ ಆಗಮ ಭೇದಗಳೆರಡರಲ್ಲಿ ಒಂದರ ಅನುಯಾಯಿಗಳಾಗಿರುತ್ತಾರೋ ಅವರು ಅದರ ಪರವಾಗಿಯೇ ಭಾಷ್ಯ ಬರೆಯುವದು ಸಹಜ. ಈ ಮಾತಿಗೆ ಸಾಕ್ಷಿಯಾಗಿ ಬ್ರಹ್ಮಸೂತ್ರ ಭಾಷ್ಯಗಳನ್ನು ಬರೆದ ಸುಪ್ರಸಿದ್ಧರ ಭಾಷ್ಯಗಳನ್ನು ನೋಡಿದರೆ ಅವರು ತಮ್ಮ ನೆಚ್ಚಿನ ಮತದ ಪರವಾಗಿಯೇ ಭಾಷ್ಯಗಳನ್ನು ಬರೆದಿದ್ದಾರೆ ಎಂಬುದು ಗೊತ್ತಾಗುತ್ತದೆ. ಶ್ರೀಕಂಠ ಶಿವಾಚಾರ್ಯರ ಪೂರ್ವಕಾಲದ ಆಗಮ ಗಳಲ್ಲಿ ಮತ್ತು ಅವರ ನಂತರದ ಭಾಷ್ಯ, ಕಾರಿಕೆ ಕಾರರ ಕೃತಿಗಳಲ್ಲಿ ಈ ಇತ್ತೆರನಾದ ಆಗಮಭೇದ ಮತ್ತು ಅವುಗಳ ಅನುಯಾಯಿಗಳ ಅಸ್ತಿತ್ವವು ಕಂಡುಬರುತ್ತದೆ. ಶ್ರೌತಾಗಮದೊಡನೆ ಅಶ್ರೌತಾಗಮವು ಬದುಕಿಕೊಂಡು ಸುಪ್ರಸಿದ್ಧಿಯನ್ನು ಪಡೆ ಯದೆ ಬಂದಿದೆ.

**VI ವಚನಾಗಮದ ಅಶ್ರೌತ ದೃಷ್ಟಿ ಶೋಧ ಸ್ಥಲ :**

ಶ್ರೌತಾಗಮದ ಬಾಹುಲ್ಯದಲ್ಲಿ ಅಶ್ರೌತಾಗಮವು ಅಡಗಿಕೊಂಡು ಬದುಕಿತ್ತೆಂಬುದು ಗೊತ್ತಾಗಿದೆ. ಸಿದ್ಧರಾಮಪ್ಪ ಪಾವಟೆಯವರು ಇದನ್ನು ಚೆನ್ನಾಗಿ ಗುರುತಿಸಿದ ಪ್ರಥಮ ಸಂಸ್ಕೃತ ಸಾಹಿತ್ಯ ವಿದ್ವಾಂಸರು. ಅಪ್ರಚಲಿತ ಸ್ಥಿತಿಯಲ್ಲಿದ್ದ ಈ ಅಶ್ರೌತ ವೀರಶೈವಾಗಮವನ್ನು ಬಸವಣ್ಣನವರು ೧೨ನೆಯ ಶತಮಾನದಲ್ಲಿ ಜನಪ್ರಿಯಗೊಳಿಸುವ ಮೂಲಕ ಅಶ್ರೌತಾಗಮದ ಪುನರ್ದರ್ಶನವನ್ನು ಮಾಡಿಸಿದರು ಎಂದು ಹೇಳಿದ್ದು ಅರ್ಥಪೂರ್ಣ. ಕಣ್ಮರೆಯಾಗಿದ್ದ ಶಾಸ್ತ್ರದ ಮತ್ತು ಅದರಲ್ಲಿ ಬೋಧಿಸಿದ 'ಶುದ್ಧವೀರಶೈವದ' ಪ್ರತಿಷ್ಠಾಪನೆಯ ಕಾರ್ಯ ಈ ಶತಮಾನದಲ್ಲಿ ನಡೆಯಿತು. ಅವರೇ ಹೇಳುವತೆ 'ಸೂಕ್ಷ್ಮಾಗಮ ಮಕುಟಾಗಮ ವಾತೂಲಾಗಮ ಮುಂತಾದ ಆಗಮಂಗಳಲ್ಲಿ ಶುದ್ಧವೀರಶೈವ ಪ್ರಮಾಣಂಗಳಿರುವವಾದರು ಇತರ ಗ್ರಂಥ ಬಾಹುಲ್ಯದಲ್ಲಿ ಅಡಗಿ ಹೋಗಿವೆ. ಅದು ಅಜ್ಞಾತವಾಸದ ಕಾಲವನ್ನು ಕಳೆದು ತಲೆಯೆತ್ತುವ ಸೂರ್ಯೋದಯದ ಕಾಲವು ಸನ್ನಿಹಿತವಾಗಿತ್ತು ಇದರ ಮುನ್ಸೂಚನೆಯಂತೆ ಅರುಣೋದಯವು ಜೇಡರ ದಾಸಿಮಾರ್ಯ, ರೇವಣ್ಣಸಿದ್ಧ, ಶಂಕರ ದಾಸಿಮಯ್ಯ, ಡೋಹರ ಕಕ್ಕಯ್ಯ, ಮಾದರ ಚನ್ನಯ್ಯ, ಓಹಿಲದೇವ ೮೩ ಮೊದಲಾದ ಶಿವಶರಣರ ಉಗಮದೊಡನೆ ೧೧ನೆಯ ಶತಮಾನದಲ್ಲಿ ಆಯಿತು. ಈ ಪರಂಪರೆಯ ಕಾರ್ಯದ ಶಕ್ತಿಕೇಂದ್ರವು ಕರ್ನಾಟಕವಾಗಿರುವುದನ್ನು ನಾವು ನೋಡುತ್ತೇವೆ. ಈ ಪುರಾತನರ ಭಕ್ತಿಯನ್ನು ಕುರಿತು ಹಂಪೆಯ ಹರಿಹರದೇವನು ಹೇಳಿದ್ದು ಅಶ್ರೌತಾಗಮದೃಷ್ಟಿಯಾಗಿರುವುದು.

ಅದು ಕಣ್ಣಪ್ಪನ ಪೂಜೆಯೋಜೆ ಬಗೆಯಲ್ ವೇದೋಕ್ತಮೆ ? ಬೇಂಟೆಯಾ ।
ಡಿದ ಜೊಮ್ಮಣ್ಣನ ಭಕ್ತಿ ಭಾವವರಿಯಲ್ ವೇದೋಕ್ತಮೇ ? ತಂದೆಯೆ ॥
ನ್ನದೆ ಚಂಡೇಶ್ವರ ಪಿಳ್ಳೆ ಮಾಡಿದುದು ಪೇಳ್ ವೇದೋಕ್ತಮೇ ? ಆತನೊ ।
ಲ್ದುದೆ ವೇದಾಗಮನೀತಿ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ॥೪೪॥

ಪಂಪಾಶತಕ

ಇದನ್ನೇ ಬಸವಣ್ಣನವರ ವಚನವು ಹರಿಹರದೇವನಿಗಿಂತ ಪೂರ್ವದಲ್ಲಿಯೇ ಹೇಳಿದ್ದುಂಟು.

.... ಆಗಮನೇಕೆ ಡಿಂಗರಿಗಂಗೆ, ....

ಕೂಡಲ ಸಂಗಮದೇವಾ ನಿಮ್ಮ ನಂಬುವದಾಚಾರವಯ್ಯಾ, ೮೪

---

೮೩ ದೇವರ ದಾಸಿಮಯ್ಯನ ವಚನಗಳು ವ .೦ ಭಾವಾರ್ಥ ವಿಜಾಪುರ (೧೯೩೯)

೮೪ ಎಸ್. ಎಸ್. ಬಸವನಾಳ (ಸಂ.) ಅದೇ ವ. ೪೬೬

ಎಮ್ಮವರು ಅಧಿಕರು, ಎಲ್ಲರಿಂದವೂ ಅಧಿಕರು :
ಪಾಕವ ಮಾಡುವ ಭಾಂಡ ಸೊಣಗನ ಡವಿಗೆಯಯ್ಯಾ ?
ಕೆರಹಿನಲ್ಲಿ ಮುಚ್ಚುವುದು ಆವ ಆಗಮವಯ್ಯಾ ?
ಕೂಡಲ ಸಂಗಮದೇವ ?....೮೫

ಮುಂತಾದ ವಿಚಾರಗಳು ಅಶ್ರೌತಾಗಮ ದೃಷ್ಟಿಯನ್ನು ವೆಗ್ಗಳವಾಗಿ ತೋರಿಸುವವು. ತಮಗಿಂತಲೂ ಪೂರ್ವದ ಶಿವಶರಣರಲ್ಲಿ ಒಬ್ಬರಾದ ಮಾದರ ಚೆನ್ನಯ್ಯಗಳ ಕೂಡ ದೇನೊಲಿದು ಊಟ ಮಾಡಿದ್ದನ್ನುದ್ಧರಿಸಿ ೮೬ ವೇದ (ಶ್ರೌತಶ್ರುತಿ) ನಡುನಡುಗಿತು ಎಂಬುದನ್ನು ಮನಂಬುಗುವಂತೆ ಹೇಳಿ ಅಶ್ರೌತ ದೃಷ್ಟಿಯನ್ನು ತೋರಿಸುತ್ತಾರೆ. ಈ ಅಶ್ರೌತಾಗಮ ಜನಪ್ರಿಯವಾಗಿತ್ತೆಂಬುದನ್ನೆ ಇಲ್ಲಿಯ ವಿಚಾರಗಳು ತಿಳಿಸುತ್ತವೆ ; ಅನೂಚಾನವಾಗಿ ನಡೆದು ಬಂದುದನ್ನು ಸೂಚಿಸುತ್ತವೆ.

**ವಚನಾಗಮದ ಅಶ್ರೌತ ದೃಷ್ಟಿಯ ವಸ್ತು ಸಾಕ್ಷಿ**

ನಿಗಮಾಗಮ ಖಂಡನೆ ; ವಚನಾಗಮದ ಕರ್ತೃಗಳು ವೇದದ ವರ್ಣ ಧರ್ಮ,ವರ್ಣ ಕರ್ಮ, ವೇದಸ್ವಯಂಭುವಾದ, ಸ್ವರ್ಗದ ವಿಚಾರ, ಮುಕ್ತಿಗಳ, ಫಲ ಮತ್ತು ಪದಗಳ ವಿಚಾರಗಳನ್ನು ಖಂಡಿಸುತ್ತಾರೆ. ಇದು ಅಶ್ರೌತ ಪ್ರತಿಭೆಯ ಕಾರ್ಯವಾಗಿದೆ.

ಮಹಾದೇವಿಯಕ್ಕಗಳು ಶ್ರುತಿಯ (ವೇದವ)ನ್ನು ಖಂಡಿಸಿದ್ದು ಇಂತಿದೆ—

ವೇದ ಶಾಸ್ತ್ರ ಆಗಮ ಪುರಾಣಂಗಳೆಲ್ಲವು
ಕೊಟ್ಟಣವ ಕುಟ್ಟಿದ ನುಚ್ಚು ತೌಡು ಕಾಣಿಭೋ !
ಇವ ಕುಟ್ಟಲೇಕೆ ? .... ಚನ್ನಮಲ್ಲಿಕಾರ್ಜುನ.೮೭

ಮಹಾದೇವಿಯಕ್ಕಗಳು ವೇದ ಶಾಸ್ತ್ರ ಆಗಮ ಮತ್ತು ಪುರಾಣಗಳೆಲ್ಲವನ್ನು ಪ್ರಯೋಜನವಿಲ್ಲದ ನುಚ್ಚು ತೌಡುಗಳಿಗೆ ಹೋಲಿಸಿದ್ದಾರೆ. ಅವುಗಳ ಅಧ್ಯಯನ ವನ್ನು 'ರಸ'ವನ್ನಲ್ಲದೆ ಕಸವನ್ನು ಕೊಡುವದು. ಆದ್ದರಿಂದ ಅವುಗಳ ಅಧ್ಯಯನವನ್ನು ಮಾಡದಿರಬೇಕೆಂಬ ಮೂಲಕ ತಮ್ಮ ಅಶ್ರೌತ ಮನೋಧರ್ಮವನ್ನು ತಿಳಿಸಿದ್ದಾರೆ. ಜಿಜ್ಞಾಸುಗಳಿಗೆ ಇದು ಒಂದು ಕಿವಿಮಾತವೆ ಸೈ.

---

೮೫ ಎಸ್. ಎಸ್. ಬಸವನಾಳ (ಸಂ) ,, ವ. ೬೦೪

೮೬ ಎಸ್. ಎಸ್. ಬಸವನಾಳ (ಸಂ) ವ. ,, ೪೩೨.

೮೭ ಡಾ. ಆರ್. ಸಿ. ಹೀರೆಮಠ (ಸಂ) ಶಿವಶರಣೆಯರ ವಚನಗಳ ಭಾಗ ೧, ಪು ೧೦೨ ವ. ೨೪೨ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ (1968)

ಮೋಳಿಗೆಯ ಮಾರಯ್ಯಗಳೆಂಬ ವಚನರ್ಷಿಯು ವೇದವನ್ನು ಕುರಿತು ಹೀಗೆ ಹೇಳುತ್ತಾರೆ—

ವೇದಕ್ಕೆ ಹೋರುವಡೆ ವೇದಕ್ಕತೀತ.
ಶಾಸ್ತ್ರಕ್ಕೆ ಹೋರುವಡೆ ಬಳಸಿನವನಲ್ಲ.
ಅರ್ಚಿಸಿ ಪೂಜಿಸಿ ಕಾಬುದಕ್ಕೆ ಹಕ್ಕಿ ಹಂಗ ನಿಮಿತ್ತವೆ ?
ಈ ಸಚ್ಚಿದನ ಸಂಗ ಬಚ್ಚ ಬಯಲು, ನಿಃಕಳಂಕಮಲ್ಲಿಕಾರ್ಜುನಾ.೮೮

ಆಧ್ಯಾತ್ಮ ಸಿದ್ಧಿಯ ಪರಮ ಗುರಿಯನ್ನು ಮುಟ್ಟಬೇಕೆಂದು ಆ ಕಾರ್ಯದಲ್ಲಿ ಶ್ರಮಿಸುವವರು ವೇದ, ಪುರಾಣ, ಶಾಸ್ತ್ರ, ಮತ್ತು ಅರ್ಚನೆ ಪೂಜೆಗಳಿಂದ ತಮ್ಮ ಗುರಿಯನ್ನು ಸಂಪಾದಿಸಲಾರರು ಎಂದು ಹೇಳುತ್ತಾರೆ. ಇದು ನಿಗಮಾಗಮಗಳ-ವರ್ಣಧರ್ಮ, ಕರ್ಮಶಾಸ್ತ್ರಗಳ ಅಸಮರ್ಥತೆಯನ್ನು ತಿಳಿಸುವುದು. ಈ ಗುಣವನ್ನು ಎತ್ತಿ ಹೇಳುವ ಮೂಲಕ ಮೋಳಿಗಯ್ಯಗಳು ಉಪನಿಷತ್ತುಗಳಂತೆ ಇವುಗಳನ್ನು ಖಂಡಿಸಿರುತ್ತಾರೆ.

ವಚನ ಭಂಡಾರಿ ಶಾಂತಯ್ಯಗಳು ಸುಪ್ರಸಿದ್ಧ ಶಿವಾನುಭವ ಮಂಟಪದ ಗ್ರಂಥಭಂಡಾರಿ ಅಥವ ವಚನ ಭಂಡಾರಿ. ಇವರು ಕೂಡ ವೇದ, ಶಾಸ್ತ್ರ ಪುರಾಣ, ಹೋಮಾದಿಗಳನ್ನು ಕುರಿತು ಹೀಗೆ ತಮ್ಮ ಅಶ್ರೌತ ದೃಷ್ಟಿ ತಿಳಿಸುತ್ತಾರೆ.

ವೇದದಲ್ಲಿ ಕಂಡುದಿಲ್ಲ; ಅದು ಮಾತಿನ ಮನೆಯಾಗಿ ಹೋಯಿತ್ತು.
ಹೋಮದಲ್ಲಿ ಕಂಡುದಿಲ್ಲ, ತಿಲ ಘೃತ ಧೋತು
ಮೊದಲಾದ ಕಾಷ್ಠ ತೃಣ ದಿಬ್ಬಲಿಗಳ ನಿಕ್ಕಿ ರೂಪಾದುದಿಲ್ಲ.
ಶಾಸ್ತ್ರವ ಕೇಳಿ ಮನ ಸಂತೈಸುವದಿಲ್ಲ;
ಪುರಾಣವ ನೋಡಿ ಪುಣ್ಯನ ಪುಣ್ಯನ ಕಂಡುದಿಲ್ಲ.
ಈತ ಕೊಟ್ಟುದ ಕೈಯ್ಯಲ್ಲಿ ಹಿಡಿದು ಕಣ್ಣಿನಲ್ಲಿ ನೋಡಿ ಮನವರಿಯದಿದೆ.೮೯
ಇನ್ನೇವೆ ? ಇದರ ನ್ವಯವ ಹೇಳು, ಆಲೇಖನಾದ ಶೂನ್ಯಕಲ್ಲಿನೊಳಗಾದವನೆ ?

ವೇದವು ಮಾತಿನ ಮನೆಯಾಗಿ ಹೋಗಿದೆ ಎಂಬುದು ಶಾಂತಯ್ಯಗಳ ಕಟಕಿ. ಹೋಮದಲ್ಲಿ ಎಳ್ಳು ತುಪ್ಪ ಹೋತು ಕಾಷ್ಠ ದರ್ಭೆಗಳ ರಾಸಿಯನ್ನು ಹಾಕಿದರೆ ದೊರೆವ ವಸ್ತು

೮೮ ಡಾ. ಆರ್. ಸಿ. ಹಿರೇಮಠ (ಸಂ) ಶಿವಶರಣೆಯರ ವಚನಗಳು
ಸಂ. ೧. ಪು ೬೪೨. ವ. ೨೨೫೨

೮೯ ಡಾ. ಆರ್. ಸಿ. ಹಿರೇಮಠ (ಸಂ) ಶಿವಶರಣೆಯರ ವಚನಗಳು
ಸಂ. ೧. ಪು. ೨೭೮ ವ. ೧೦೩೫

ವೆಂದರೆ ಹೊಗೆ ಮಾತ್ರ ಎಂದು ತಿಳಿಸುವ ಮೂಲಕ ಯಜ್ಞ, ಯಾಗಾದಿ, ಹೋಮ ಹವನಗಳ ನಿಷ್ಪ್ರಯೋಜಕತೆಯನ್ನು ತೋರಿಸಿದ್ದಾರೆ. ಮನದ ಶಾಂತಿಯು ಶಾಸ್ತ್ರ ಕೇಳುವದರಿಂದ ದೊರೆಯುವದಿಲ್ಲ. ಅದು ತಗರ ಹೋರಾಟ ಎಂಬ ಭಾವವನ್ನು ವ್ಯಕ್ತ ಗೊಳಿಸಿದ್ದಾರೆ. ಪುರಾಣದ ಓದು ನಿಷ್ಫಲ ಪ್ರದಾಯಕ ಎನ್ನುವರು. ಹೀಗೆ ಇವು ಗಳಿಂದ ಉಂಟಾಗುವ ವಿವಿಧ ಬಗೆಯ ನಿಷ್ಪ್ರಯೋಜಕತೆಗಳನ್ನು ತಿಳಿಸುವ ಮೂಲಕ ತಮ್ಮ ಅಶ್ರೌತ ದೃಷ್ಟಿಯನ್ನೆ ಬಿಂಬಿಸಿದ್ದಾರೆ. ೯೦

ಅಲ್ಲಮಪ್ರಭುಗಳು ಆಗಮ ವೇದ ಪುರಾಣಗಳನ್ನು ಕುರಿತು ಹೀಗೆ ಹೇಳುತ್ತಾರೆ.

ಆಗಮ ಪುರುಷರಿರಾ, ನಿಮ್ಮ ಆಗಮ ವಾಯುವಾಗಿ ಹೋಯಿತ್ತಲ್ಲಾ.
ವಿದ್ಯಾ ಪುರುಷರಿರಾ, ನಿಮ್ಮ ವಿದ್ಯೆ ಅವಿದ್ಯೆಯಾಗಿ ಹೋದಲ್ಲಿ,
ಬರುಮುಖರಾಗಿದ್ದೀರಲ್ಲಾ !
ವೇದ ಪುರುಷರಿರಾ ನಿಮ್ಮ ವೇದ ಹೊಲಬುದಪ್ಪಿ ಹೋದಲ್ಲಿ.
ವೇದವೆ ದೈವವೆಂದು ಕೆಟ್ಟಿರಲ್ಲಾ,!
ಪುರಾಣ ಪುರುಷರಿರಾ, ನಿಮ್ಮ ಪುರಾಣ ವಿಚಾರಭ್ರಷ್ಟಾಗಿ ಹೋದಲ್ಲಿ,
ನೀವು ಒಡನೆ ಭ್ರಷ್ಟರಾಗಿ ಹೋದಿರಲ್ಲಾ !
ಶಾಸ್ತ್ರ ಪುರುಷರಿರಾ, ನಿಮ್ಮ ಶಾಸ್ತ್ರ ಮಹಾಪಥದ ಹೊನಲಲ್ಲಿ ಹೋದಲ್ಲಿ,
ಭಕ್ತದೇಹಿಕ ದೇವನೆಂದರಿಯದೆ, ಕೆಟ್ಟಿರಲ್ಲಾ !
'ಯತ್ರ ಶಿವ ತತ್ರ ಮಹೇಶ್ವರ' ನೆಂದು ಹೇಳಿತ್ತ ಮುನ್ನ.
ಅಂತು ಭಕ್ತ ನಿತ್ಯ ಸತ್ಯ ಸನ್ನಿಹಿತ, ಗುಹೇಶ್ವರ ನಿಮ್ಮ ಶರಣ.

ಅಲ್ಲಮ ಪ್ರಭುಗಳು ವೇದ ಆಗಮ ಪುರಾಣ ಶಾಸ್ತ್ರಗಳ ಪರಿಣತೆಯು ದೇವರೊಡನೆ ಬದುಕಲು ಕಲಿಸುವದಿಲ್ಲ. ದೇವರು ತನ್ನಲ್ಲಿ ಬಂದು ನೆಲೆಸಲು ಇವುಗಳ ಅಧ್ಯಯನವು ಸಹಾಯ ಮಾಡಲಾರದು. ಇವುಗಳ ಅಧ್ಯಯನದ ಬದಲು ಭಕ್ತನಾದರೆ ಆತನು ಬಂದು ನಿನ್ನಲ್ಲಿಯೆ ನೆಲೆಸುವನೆಂದು ತಿಳಿಸುವ ಮೂಲಕ ಇವುಗಳ ಪರ್ಯಾಯ ವ್ಯವಸ್ಥೆಯನ್ನು ಈ ವಚನವು ಸೂಚಿಸಿದೆ. ಇದೇ ರೀತಿ ಚನ್ನಬಸವಣ್ಣನವರು ಕೂಡ ವೇದ ಶಾಸ್ತ್ರ ಪುರಾಣ ಆಗಮ ಮೊದಲಾದ ಆಪ್ತವಾಕ್ಯವೆಂದು ಗ್ರಹಿಸಲಾಗಿರುವುದನ್ನು ನಿಂದಿ ಸಿದ್ದಾರೆ. ೯೧ ಇವರೆಲ್ಲರಿಗಿಂತ ವೇದಾಗಮಗಳ ಉಗ್ರವಾದ ಖಂಡನೆಯು ಬಸವಣ್ಣ

---

೯೦ ಡಾ. ಎಲ್. ಬಸವರಾಜು. ಅಲ್ಲಮನ ವಚನ ಚಂದ್ರಿಕೆ ವ. ೧೨೧೩. ನಳಿನೀ ಶಂಕರ ಪ್ರಕಾಶನ ಮೈಸೂರ (1960)

೯೧ ಪಿ. ಜಿ. ಹಳಕಟ್ಟಿ (ಸಂ) ಶೂನ್ಯಸಂಪಾದನೆ, ಪ್ರಭುದೇವರ ಆರೋಹಣ, ವ. ೧೨೫ ವಿಜಾಪುರ (1930)

ನವರಿಂದ ನಡೆದಿದೆ. ಇಲ್ಲಿ ನೆನಪಿಗೆ ಬರುವ ಒಂದು ಮಾತು ಎಂದರೆ ವೇದವನ್ನು ಉಪನಿಷತ್ತುಗಳು ಖಂಡಿಸಿವೆ. ಆದರೆ ಋಗ್ವೇದವೇ ಸ್ವತಃ ಯಜ್ಞಯಾದಿಗಳನ್ನು ಖಂಡಿಸಿದಷ್ಟು ಉಗ್ರವಾಗಿ ಖಂಡಿಸಿಲ್ಲ. ಋಗ್ವೇದದಷ್ಟೇ ಉಗ್ರವಾಗಿ ವೇದವನ್ನು ಬಸವಣ್ಣನವರು ಖಂಡಿಸಿದ್ದಾರೆ. ಬಸವಣ್ಣನವರಂತೆ ಇನ್ನುಳಿದ ಯಾವ ಆಸ್ತಿಕರೂ ವೇದವನ್ನು ಖಂಡಿಸಿದಂತೆ ಕಾಣುವದಿಲ್ಲ.

> ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳನಿಕ್ಕುವೆ; ೯೨
> ತರ್ಕದ ಬೆನ್ನ ಬಾರನೆತ್ತುವೆ, ನೋಡಯ್ಯಾ!
> ಮಹಾದಾನಿ ಕೂಡಲ ಸಂಗಮದೇವಾ,
> ಮಾದಾರ ಚನ್ನಯ್ಯನ ಮಗ ನಾನಯ್ಯ.

ವೇದ, ಮೀಮಾಂಸ ಶಾಸ್ತ್ರ (ಧರ್ಮಸೂತ್ರಗಳು)ವು, ಶ್ರೌತಾಗಮವು ಬಸವಣ್ಣನವರ ಕಟು ಟೀಕೆಗೆ ಗುರಿಯಾಗಿವೆ. ಇದಕ್ಕೆ ಕಾರಣವೆಂದರೆ ದಯವೇ ಧರ್ಮದ ಮೂಲ, ಕೊಲಲಾಗದು ಬಾಯಿಚ್ಚೆಗೆ (ಅಹಿಂಸೆ) ಮುಂತಾದ ವ್ರತಗಳ ಪಾಲನೆಯು ಆಧ್ಯಾತ್ಮಸಿದ್ಧಿಗೆ ಅವ್ಯಶವಿರುವಾಗ, ಇದಕ್ಕೆ ವ್ಯತಿರಿಕ್ತ ಆಚರಣೆಯನ್ನು ಅವು ಬೋಧಿಸುತ್ತಿರುವುದು. ಆದ್ದರಿಂದ ಬಸವಣ್ಣನವರು ಅವುಗಳನ್ನೆಲ್ಲ ಖಂಡಿಸಿರುವರು. ಈ ರೀತಿಯ ಖಂಡನೆಯು ಗಣಾಚಾರವಾಗಿದೆ. ಈ ಆಚರಣೆಯ ದೃಷ್ಟಿ ಅಶ್ರೌತ—ದೃಷ್ಟಿಯು (Free thinking or rational thinking). ಬಸವಣ್ಣನವರು ಇದು ಮದ್ದಾನೆ. ಇದನ್ನು ನಿಯಂತ್ರಿಸಲು ನಿಗಳವನಿಕ್ಕುವದು ಒಂದೇ ಒಂದು ಉಪಾಯವೆಂದು ತಿಳಿಸುತ್ತಾರೆ. ಶಾಸ್ತ್ರವು ಕರ್ಮವನ್ನು ಭಜಿಸುವದನ್ನು ವಿರೋಧಿಸಿ, ಅದನ್ನು ತಡೆಯುವ ಕಾರ್ಯವು ಇದು. ಇದನ್ನು ಅವರು ಪ್ರತಿಪಾದಿಸುತ್ತಾರೆ. ತರ್ಕವು ಅಂದರೆ ಕುತರ್ಕವು ಜನರನ್ನು ತಪ್ಪುದಾರಿಗೆ ಎಳೆಯುವದೆಂದು ಅರಿದ ಬಸವಣ್ಣನವರು ಅದರ ಬೆನ್ನಬಾರ ನೆತ್ತುವ ಕ್ಯಾರದಲ್ಲಿ ತೊಡಗಿದ್ದಾರೆ. ಮೀಮಾಂಸಕರಾದ ಕುತರ್ಕಿಗಳ ಪ್ರಾಬಲ್ಯವನ್ನಿದು ತೋರಿಸುತ್ತದೆ. ಶ್ರೌತಾಗಮದ ಮೂಗಿನಂತಿರುವ ವರ್ಣವ್ಯವಸ್ಥೆ ಮತ್ತು ಕರ್ಮಗಳ ವಿರುದ್ಧ ಹೋರಾಟಕ್ಕಿಳಿದು ಅವುಗಳನ್ನು ತಡೆಯುವುದೆಂದರೇನೇ ಅದರ ಮೂಗು ಕೊಯ್ಯುವದೆ ಆಗಿದೆ. ಈ ಗುಣಾಚಾರದ ಮಾತುಗಳನ್ನಾಡಿದ ಅವರು ಕೃತಿಗೂ ಇಳಿದಿದ್ದಾರೆ. ಸಮಾಜದಲ್ಲಿ ಅದು ಪುನಾ ತಲೆಯನ್ನು ಎತ್ತದಂತೆ ಮಾಡಿದ್ದಾರೆ. ಈ ಮಹಾ ಘನವಾದ ಕಾರ್ಯವು ಬಸವಣ್ಣನವರಿಂದಾಗಿ ಅಶ್ರೌತಾಗಮ ಜನಪ್ರಿಯವಾಗಿದೆ. ಇದೆಲ್ಲ ಅವರ ಶ್ರೌತ ದೃಷ್ಟಿಗೆ ಸಾಕ್ಷಿ.

---

೯೨ ಎಸ್. ಎಸ್, ಬಸವನಾಳ (ಸಂ) ಆದೇ ವ, ೭೧೩

**ಯಜ್ಞ ಯಾಗಾದಿಗಳ ಖಂಡನೆ :**

ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು
ಎಲೆ ಹೋತೆ, ಅಳು ಕಂಡಾ!
ವೇದವನೋದಿದವರ ಮುಂದೆ ಅಳು ಕಂಡಾ! ೯೩
ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲ ಸಂಗಮದೇವ.

ಬಸವಣ್ಣನವರು ಈ ವಚನದಲ್ಲಿ ವೇದದ ಉದ್ದೇಶವು ಅಗ್ರಾಹ್ಯವಾಗಿರುವುದನ್ನು; ಅದರ ಸಾಕ್ಷ್ಯವು ಅಸ್ವೀ ಕೃತವಾಗಿರುವದನ್ನು, ಅದೇ ರೀತಿ ಶಾಸ್ತ್ರವುಕೂಡ ಒಪ್ಪಿತವಾಗಿರುವದಿಲ್ಲಾ ಎಂಬುದನ್ನು ಹರಕೆಗಾಗಿ ತಂದಂಥ ಹೋತವನ್ನು ಕಂಡು ಮನ ನೊಂದು ಆ ಹೋತವನ್ನೇ ಕುರಿತು ಹೇಳಿದ ವಚನವಿದು. ಇನ್ನೊಂದೆಡೆ "ಹರಕೆಗೆ ತಂದ ಕುರಿಯು ತಳಿರು ಮೇಯ್ದಿತ್ತು" ಎಂದು ಹೇಳಿದ್ದಿಲ್ಲಿ ಸ್ಮರಣೆಗೆ ಬರುತ್ತದೆ. ಈ ಎಲ್ಲ ಮಾತುಗಳು ಅಹಿಂಸಾಧರ್ಮವನ್ನು ಅಥವಾ ದಯವೇ ಧರ್ಮವೆಂಬುದನ್ನು ಸೂಚಿಸಿದ್ದು ಇದು ಅಶ್ರೌತ ಬೋಧೆಯಾಗಿದೆ. ಅದಕ್ಕಾಗಿ ಆದಯ್ಯ ಅವರು ವಿಧಿವತ್ತಾದ ವಚನವನ್ನು ಹೇಳಿದ್ದು ಇಂತಿದೆ-

ವೇದಗಳ ಹಿಂದೆ ಹರಿಯದಿರು, ಹರಿಯದಿರು.
ಶಾಸ್ತ್ರಂಗಳ ಹಿಂದೆ ಸುಳಿಯದಿರು, ಸುಳಿಯದಿರು.
ಆಗಮಂಗಳ ಹಿಂದೆ ತೊಳಲದಿರು, ತೊಳಲದಿರು.
ಸೌರಾಷ್ಟ್ರಸೋಮೇಶ್ವರನ ಕೈಪಿಡಿದು,
ಶಬ್ದ ಜಾಲಂಗಳಿಗೆ ಬಳಲದಿರು ಬಳಲದಿರು.

ಈ ವಚನದಲ್ಲಿಯ ದ್ವಿರುಕ್ತಿಗಳೆಂದರೆ 'ಹರಿಯದಿರು, ಹರಿಯದಿರು,' 'ಸುಳಿಯದಿರು ಸುಳಿಯದಿರು', 'ತೊಳಲದಿರು ತೊಳಲದಿರು', ಮತ್ತು 'ಬಳಲದಿರು, ಬಳಲದಿರು' ಎಂಬುವು. ವಚನಕಾರರು ಹೀಗೆ ದ್ವಿರುಕ್ತಿಗಳನ್ನು ಬಳಸುವ ಮೂಲಕ ತಮ್ಮ ವಿಚಾರಧಾರೆಗೆ ಅಥವ ಅಭಿಪ್ರಾಯಕ್ಕೆ ಒತ್ತುಕೊಡುವರು. ಇದು ಅಧಿಕಾರ ವಾಣಿಯೆಂದೂ ಗೊತ್ತಾಗುತ್ತದೆ. ಇದು ಶಾಸ್ತ್ರಾಧ್ಯಯನದಲ್ಲಿ ತೊಡಗುವವರಿಗೆ ಸೂಚಿಸಿದ ಎಚ್ಚರಿಕೆಯ ವಿಚಾರವೂ ಆಗಿದೆ. ಈ ಮೂಲಕ ಅವರು ತಮ್ಮ ಅಶ್ರೌತ ದೃಷ್ಟಿಕೋನವನ್ನು ಸಬಲಗೊಳಿಸಿದ್ದಾರೆ. ಅದು ವಿಧಿವಾಕ್ಯ ಸ್ವರೂಪ ಪಡೆದು ಶಾಸ್ತ್ರಸಮ್ಮತವೂ ಆಗಿದೆ.

---

೯೩ ಎಸ್. ಎಸ್. ಬಸವನಾಳ (ಸಂ). ಅದೇ: ೩೬೪

**ಜಾತಿ ಅರ್ಥವ ವರ್ಣನಿಂದೆ :**

ವರ್ಣವ್ಯವಸ್ಥೆಯು ಆಗಾಗ ಸಿಥಿಲವಾಗುವದನ್ನು ಅದರ ಚರಿತ್ರೆಯು ತಿಳಿಸುತ್ತದೆ. ಹೀಗೆ ಸಿಥಿಲಗೊಂಡಾಗ ಅದರ ಪುನಾಪ್ರತಿಷ್ಠಾಪನಾಕಾರ್ಯವು ಶಾಸ್ತ್ರಕಾರರಿಂದ, ರಾಜದಂಡ ನೀತಿಯಿಂದ ನಡೆಯುತ್ತ ಬಂದಿದೆ. ಈ ಪುನಾಪ್ರತಿಷ್ಠಾಪನಾ ಕಾರ್ಯವು ಮಧ್ಯಯುಗದಲ್ಲಿ ಅದ್ದೂರಿಯಿಂದ ನಡೆಯಿತು. ವರ್ಣವ್ಯವಸ್ಥೆಯ ಕಾರ್ಯದಲ್ಲಿ ವೈಚಾರಿಕ ಶಕ್ತಿಯ ದಮನ ಮತ್ತು ಶೋಷಣೆಗಳೆರಡೂ ಅಧಿಕಗೊಂಡವು. ಆಗ ಈ ಅಂಧತ್ವವನ್ನು ಹೋಗಲಾಡಿಸುವದು ಅನಿವಾರ್ಯದ ಕಾರ್ಯವಾಯಿತು. ಈ ಕಾರ್ಯದಲ್ಲಿ ಅಂದರೆ ವರ್ಣವ್ಯವಸ್ಥೆಯ ಕಪಿಮುಷ್ಟಿಯಿಂದ ಸಮಾಜವನ್ನು ಬಿಡಿಸುವ ಕಾರ್ಯದಲ್ಲಿ ವಚನಕಾರರು ಮಗ್ನರಾದರು. ಇವರು ಆಸ್ತಿಕರೇ ವಿನಾ ನಾಸ್ತಿಕ ಧರ್ಮ ಸಂಸ್ಥಾಪಕರಲ್ಲ ಬುದ್ಧನಂತೆ. ಆಸ್ತಿಕ ವಿಚಾರವಾದಿಗಳೆ ಆಸ್ತಿಕ ಧರ್ಮದ ಶುದ್ಧೀಕರಣ,ಪುನಾಪ್ರತಿಷ್ಠಾಪನಾಕಾರ್ಯಗಳನ್ನು ಮಾಡಿರುವದು ಚರಿತ್ರಾರ್ಹ ಸಂಗತಿ. ಈ ವಚನಕಾರರ ಕಾರ್ಯಪ್ರಭಾವವು ೧೧ ಮತ್ತ ೧೨ ನೆಯ ಶತಮಾನಗಳಲ್ಲಿ ಭಾರತದ ಬಹುಭಾಗದ ಮೇಲೆ ಆಯಿತು. ಅಂದರೆ ಕೇವಲ ಶೈವೀಯರಮೇಲೆಯಷ್ಟೇ ಆಗಿರದೆ ವೈಷ್ಣವ ಸಂತರಮೇಲೆಯೂ ಆಯಿತು. ಇದಕ್ಕೆ ಉದಾಹರಣೆಯೆಂದರೆ ೧೩ ನೆಯ ಶತಮಾನದಲ್ಲಿಯ ಜ್ಞಾನದೇವನ ಚರಿತ್ರೆಯು. ಇದು ಅಶ್ರೌತಪ್ರಣಾಲಿಯ ಚರಿತ್ರೆಯ ಒಂದು ಘಟ್ಟಮಾತ್ರ. ಈ ಪ್ರಣಾಲಿ ಸಜೀವ ಪ್ರಣಾಲಿ. ೨೦ ನೆಯ ಶತಮಾನದಲ್ಲಿ ಮಹಾತ್ಮಾಗಾಂಧಿಯವರನ್ನು ಕೂಡ ಈ ಪ್ರಣಾಲಿಯು ಆಕರ್ಷಿಸಿತು. ಇವರ ಪೂರ್ವದ ೧೮ ಮತ್ತು ೧೯ ನೆಯ ಶತಮಾನಗಳಲ್ಲಿ ಅದು ಚಿಕ್ಕಚಿಕ್ಕ ನದಿಗಳೋಪಾದಿಯಲ್ಲಿ ಪ್ರವಹಿಸಿ, ಗಾಂಧಿಯವರು ಕಾರ್ಯಕ್ಷೇತ್ರ ಪ್ರವೇಶಿಸುವ ಮುನ್ನ ಸಾಧುಸಂತರಿಂದ ಅವರ ಕಾರ್ಯಕ್ಷೇತ್ರ ಸಿದ್ಧಗೊಂಡಿತ್ತು ಎಂಬುದು ಅದರ ನಿತ್ಯನವೀನತೆಗೆ ಮತ್ತು ನಿರಂತತೆಗೆ ಸಾಕ್ಷಿ ಆಗಿದೆ. ವೈಷ್ಣವ ಸಂತರಲ್ಲಿ ಮತ್ತು ಮಹಾತ್ಮಾಗಾಂಧಿಯವರಲ್ಲಿ ವಚನಕಾರರಂತೆ ತೀವ್ರತೆ ಅಷ್ಟು ಕಂಡು ಬರುವದಿಲ್ಲ. ಇದು ಗಮನಿಸಬೇಕಾದ ಅಂಶ. ಅಂದರೆ ಇವರು ವಚನಕಾರರಂಥ ತೀವ್ರ ಅಹಿಂಸಾತ್ಮಕ ಅಶ್ರೌತವಾದಿಗಳಾಗಲಿಲ್ಲ. ಒಟ್ಟಿನ ಮೇಲೆ ಭಾರತೀಯರಲ್ಲಿ ಅಶ್ರೌತತೆಯು ಒಂದು ಪ್ರಬಲ ಪ್ರಭಾವಿ ಪ್ರಣಾಲಿಯಾಗಿ, ಆಚಾರ ಧರ್ಮವಾಗಿ ಉಳಿದು ಬೆಳೆದು ಒಂದು ಕ್ರಾಂತಿಗೆ ಕಾರಣವಾದದ್ದು ಶಿವಶರಣರಲ್ಲಿ ಮಾತ್ರ ಎಂದು ತೋರುತ್ತದೆ. ಈ ದೃಷ್ಟಿಯ ಪ್ರಖರತೆ ಮತ್ತು ಪ್ರಾಬಲ್ಯಗಳೆರಡೂ ಹಾಸುಹೊಕ್ಕಾಗಿ ಪ್ರಾರಂಭವಾದದ್ದು ಯಜ್ಞಭಂಜಕ ರುದ್ರನಿಂದ, ಬಡಿಗ ಕುಂಬಾರ ಕಳ್ಳಕಾಕರು ಮುಂತಾಗಿ ಅಖಿಲ ಶೂದ್ರ ಸಮೂಹದ ಮುಖಂಡನಾದ ರುದ್ರನಿಂದ ಎಂಬುದು ಗಮನಾರ್ಹ ಸಂಗತಿ. ಇದು ಪ್ರಜಾಪ್ರಭುತ್ವದ ಸಮತಾ ದೃಷ್ಟಿಯೂ ಆಗಿದೆ. ವರ್ಣಧರ್ಮದ ವಿವರಣೆಯ ಸಂದರ್ಭದಲ್ಲಿ ಈ ಎರಡು ಮಾತುಗಳು ಅವಶ್ಯ, ಪ್ರಸ್ತುತ ಆಗಿವೆ. ವರ್ಣವ್ಯವಸ್ಥೆ

ಎಂಬುದು ಕರ್ಮವ್ಯವಸ್ಥೆ ಅಥವ ಉದ್ಯೋಗವ್ಯವಸ್ಥೆ ಎಂಬ ಅನಾದಿ ಸಿದ್ಧಾಂತವನ್ನು ೧೨ ನೆಯ ಶತಮಾನದಲ್ಲಿ ಬಸವಣ್ಣನರು ಎತ್ತಿಹಿಡಿದ ಪ್ರಪ್ರಥಮರು ಎಂಬುದು ಸಮಾಜ ಸಿದ್ಧಾಂತಿಗಳ, ಇತಿಹಾಸತಜ್ಞರ ಕಣ್ಣು ತೆರೆಯಿಸುವ ಮಾತು.

> ....ಕಾಸಿ ಕಮ್ಮಾರನಾದ, ಬೀಸಿ ಮಡಿವಳನಾದ, [೯೪]
> ಹಾಸನಿಕ್ಕಿ ಸಾಲಿಗನಾದ, ವೇದವನೋದಿ
> ಹಾರುವನಾದ........

ಎಂದು ಬಸವಣ್ಣನವರು ಹೇಳುವದು ಅದನ್ನು ಅನುಷ್ಠಾನಕ್ಕೆ ತಂದಸಂಗತಿಯು ವರ್ಣರಹಿತ ಸಮಾಜವ್ಯವಸ್ಥೆಗೆ ೧೨ನೆಯ ಶತಮಾನದಂದು ಹಾಡಿದ ನಾಂದಿ, ಕೊಟ್ಟ ಸೂತ್ರ. ಉದ್ಯೋಗ ವ್ಯವಸ್ಥೆ ಜಾತಿವ್ಯವಸ್ಥೆಯಾಗಿ ಜಾತಿ ಜಾತಿ ಅಥವ ಕುಲ ಕುಲ ಎಂದು ಹೆಮ್ಮೆಯಲ್ಲಿಯ ಮದಾಂಧರ ಅನೀತಿಯನ್ನು ಬಸವಣ್ಣನವರು ಖಂಡಿಸಿದ್ದಾರೆ. ಇದು ಅವರ ಅಶ್ರೌತತೆ. ಅವರ ಮಾತುಗಳು ಇಂತಿವೆ....

> ಕೊಲುವವನೆ ಮಾದಿಗ, ಹೊಲಸು ತಿಂಬುವನೆ ಹೊಲೆಯ [೯೫]
> ಕುಲವೇನೋ ಆವಂದಿರ ಕುಲವೇನೋ ?
> ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
> ನಮ್ಮ ಕೂಡಲಸಂಗನ ಶರಣರೇ ಕುಲಜರು !

ಆಚಾರವು ಜೀವಜಗತ್ತು ಮತ್ತು ತನಗು ಇರುವ ಏಕತ್ವ ಸಿದ್ಧಾಂತವನ್ನಾಧರಿಸಿದ ಸಂಬಂಧದ ಅರಿವಿನಿಂದ ಕೂಡಿರಬೇಕೆಂಬುದು ಈ ಮಂತ್ರ (ವಚನ) ದ ಆಸೆಯು. 'ಈಶಾವಾಸ್ಯಂ ಇದಂ ಸರ್ವಂ' ಅಥವ 'ಅಹಂ ಬ್ರಹ್ಮಾಸ್ಮಿ' ಎಂಬ ಮಂತ್ರಾಲೋಚನೆಯು ಈ ಏಕತ್ವ ಸಿದ್ಧಾಂತದ ಸೂತ್ರ. ಇಲ್ಲದೆ ಹೋದಲ್ಲಿ ಜೀವ ಜಗತ್ತಿನಲ್ಲಿ ಹಿಂಸೆ ಕ್ರೌರ್ಯಗಳು ತಾಂಡವವಾಡುವವು. ಇದನ್ನು ತಪ್ಪಿಸುವವನೇ 'ಕುಲಜ', ಅಂದರೆ ತನ್ನಂತೆ ಉಳಿದ ಜೀವ ಜಗತ್ತು ಎಂದು ತಿಳಿದಪ್ರಜ್ಞಾನಿ. ಇವನು ಆಚಾರವಂತನಾಗಿರುತ್ತಾನೆ. ಆದ್ದರಿಂದ ಕುಲಜ. ಇವನಿಂದ ಶಾಂತಿ, ಸಮೃದ್ಧಿ, ಭಾವೈಕ್ಯ ಸಿದ್ಧಿ. ಯಜ್ಞದ ಹೆಸರಿನಲ್ಲಾಗಲಿ, ವಿಷಯಭೋಗ ಲಾಲಸೆಯ ಹೆಸರಿನಲ್ಲಾಗಲಿ ಕೊಲಲಾಗದು. ಹೊಲಸು ಆಹಾರ ಮತ್ತು ವಿಚಾರಗಳನ್ನು ತಿನಲಾಗದು ಎಂಬ ಕಟ್ಟಳೆಯನ್ನು ಹಾಕಿಕೊಳ್ಳುವುದೇ ಅಶ್ರೌತದೃಷ್ಟಿ. ಈ ಅಶ್ರೌತ ದೃಷ್ಟಿಗೆ ಮಾತ್ರ ಈ ಆಚಾರ ಸಿದ್ಧಿ ಸಾಧ್ಯ, ನಿಗ್ರಹ ಸಾಧ್ಯ ಎಂದು ಹೇಳಿ ತತ್ತ್ವ ಆಧಾರಿತ

---

೯೪ ಎಸ್, ಎಸ್. ಬಸವನಾಳ (ಸಂ) ಅದೇ ವ ೯೫೨

೯೫ ಎಸ್, ಎಸ್, ಬಸವನಾಳ [ಸಂ] ಅದೇ ವ ೫೯೩

ಅಹಿಂಸಾಧರ್ಮದವನು ಕುಲಜನೇ ವಿನಾ ಉತ್ತಮ ವರ್ಣದಲ್ಲಿ ಹುಟ್ಟಿದ ಮಾತ್ರಕ್ಕೆ ಕುಲಜನಾಗಲಾರ ಎಂದು ಈ ವಚನ ತಿಳಿಸುತ್ತದೆ. ಇದು ವರ್ಣವ್ಯವಸ್ಥೆಯಲ್ಲಿ ನಂಬುಗೆಯಿದ್ದು ಪ್ರಾಣವಧೆ, ಅಭಕ್ಷ್ಯಭಕ್ಷ್ಯ ಪ್ರಿಯರಾದವರಿಗೆ ಕೊಟ್ಟ ನೈತಿಕ ಸಂಹಿತೆ. ಇದು ಅಶ್ರೌತ ಧರ್ಮವಿಧಿ. ಈ ಧರ್ಮದ ಉಜ್ವಲ ಚರಿತೆ ನಿರ್ಮಿಸಿದವರು ಶರಣರು.

ಅವರದೇ ಆದ ಇನ್ನೊಂದು ವಚನವು ಈ ಅಶ್ರೌತ ಪ್ರಣಾಲಿಯ ಮತ್ತೊಂದು ಮುಖವನ್ನು ತೋರಿಸುತ್ತದೆ. ಇಲ್ಲಿ ಇರುವ ಬೋಧೆಯೆಂದರೆ ಪ್ರತಿಯೊಬ್ಬನೂ ಆತ್ಮ ನಿರೀಕ್ಷಣೆ ಮಾಡಿಕೊಂಡು ಶುದ್ಧಿಯ ಸಿದ್ಧಿ ಸಂಪಾದಿಸುವದನ್ನು ತಿಳಿಸುವದಾಗಿದೆ.

ಉತ್ತಮಕುಲದಲ್ಲಿ ಪುಟ್ಟಿದವನೆಂಬ [೯೭]  
ಕಷ್ಟತನದ ಹೊರೆಯ ಹೊರಿಸದಿರಯ್ಯಾ.  
ಕಕ್ಕಯ್ಯನೊಕ್ಕುದನ್ನಿಕ್ಕ ನೋಡಯ್ಯಾ;  
ದಾಸಯ್ಯ ಶಿವದಾನವನೆರೆಯ ನೋಡಯ್ಯಾ;  
ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ;  
ಉನ್ನತ ಮಹಿಮಾ, ಕೂಡಲ ಸಂಗಮದೇವಾ  
ಶಿವಧೋ ! ಶಿವಧೋ !!

ಉತ್ತಮ ಕುಲದಲ್ಲಿ ತಾನು ಹುಟ್ಟಿದವನೆಂದು ಹೇಳಿಕೊಳ್ಳುವದು ಪ್ರತಿಯೊಬ್ಬ ನಿಗೂ ಹೆಮ್ಮೆಯ ವಿಷಯ. ಯಾವುದೇ ವ್ಯಕ್ತಿಯ ಉತ್ತಮಿಕೆಯನ್ನು ಜಾತಿ ಅಥವ ಕುಲ (ವರ್ಣ) ನಿರ್ಧರಿಸಲಾರದು ಎಂಬುದು ವಿವೇಕವುಳ್ಳವನಿಗೆ ಗೊತ್ತು. ಈ ಸತ್ಯ ಸಂಗತಿಯನ್ನು ಅಶ್ರೌತ ದೃಷ್ಟಿಯವನೊಬ್ಬನು ಮಾತ್ರ ಎತ್ತಿ ಹಿಡಿಯ ಬಲ್ಲನು, ಆಚರಿಸಿ ತೋರಿಸಬಲ್ಲನು. ಧಾರ್ಮಿಕ ಬದುಕನ್ನು ಬದುಕುವವರಿಗೆ ಉತ್ತಮ ಕುಲದವನು ತಾನು ಎಂಬ ಅರಿವು ಕೇವಲ ಅಜ್ಞಾನ ಹಾಗೂ ಅಡಚಣಿ. ಇದು ಕುಲಮದವೆಂದು ಸುಪ್ರಸಿದ್ಧವೇ ಆಗಿದೆ. ರಾಮಕೃಷ್ಣ ಪರಮಹಂಸರು, ಮತ್ತು ಶಂಕರಾಚಾರ್ಯ ರಂಥವರಲ್ಲಿ ಕೂಡ ಒಂದು ಕ್ಷಣ ಈ ಕುಲಮದದರಿವು ಇಣಕಿ ಹಾಕಿದೆ ಎಂದಾಗ ಉಳಿದವರ ಪಾಡೇನು ? ಇದು ಒಂದು ಭಾರವಾದ ಹೊರೆ. ಈ ಭಾರವಾದ ಹೊರೆ ಯನ್ನು ಬಸವಣ್ಣನವರು ಮಾತ್ರ ಹೊತ್ತಂತಿಲ್ಲ. ಯಾಕೆಂದರೆ ಅವರು ಕೀಳಿಂಗಲ್ಲದೆ ಹಯನ ಕರೆಯದು ಎಂಬ ವಾದದ ಮನೋಧರ್ಮವು ಮೈಗೊಂಡವರು. ಇಲ್ಲವಾದಲ್ಲಿ ಉತ್ತಮ ಕುಲದವ ಎಂದು ಸಂಬೋಧಿಸಬೇಡಿರಿ ಎಂದು ಹೇಳುವುದು ಸಾಧ್ಯವೆ ? ಈ ಅರಿವು ಉಂಟಾದಲ್ಲಿ ತಾವು ಲಿಂಗಸ್ವರೂಪಿಗಳಾದ ಕಕ್ಕಯ್ಯ, ದಾಸಯ್ಯ, ಮತ್ತು

---

೯೭ ಎಸ್, ಎಸ್, ಬಸಡನಾಳ. ಆದೇ. ವ ೩೪೩

ಚನ್ನಯ್ಯಗಳ ಪ್ರಸಾದ ಕಳೆದುಕೊಳ್ಳಬೇಕಾಗುತ್ತದೆ ಎಂಬ ಭೀತಿಯನ್ನು ವ್ಯಕ್ತಗೊಳಿಸಿದ್ದಾರೆ. ಇದು ಉಚ್ಚ ನೀಚ ಕುಲಭಾವನೆಯ ಧರ್ಮದೃಷ್ಟಿಗೆ ವ್ಯತಿರಿಕ್ತವಾದ ಅಶ್ರೌತ ದೃಷ್ಟಿಗೆ ಸಾಕ್ಷಿ. ಇಂಥ ಸದಾ ಎಚ್ಚರಿಕೆಯ ಬದುಕು ಈ ದೃಷ್ಟಿಯ ಧರ್ಮಾಚಾರವಾಗಿದೆ. ಕುಲಮದವು ಆಧ್ಯಾತ್ಮಿಕ ಬದುಕಿನ ದಾರಿಯಲ್ಲಿಯ ಅಗ್ನಿಹೊಳೆಯಾಗಿರುವಂತೆ, ವ್ಯಾವಹಾರಿಕ ಜೀವನದಲ್ಲಿ ಕೂಡ ಅಗ್ನಿಹೊಳೆಯೆ. ಕುಲಮದದಿಂದಿದ್ದವರನ್ನು ಸಮಾಜವು ಕ್ಷಮಿಸದು. ಇಲ್ಲಿ ಸಲ್ಲಬೇಕಾದರೆ 'ನಿರಹಂಕಾರಿ' ಆಗಿರಬೇಕು. ಬಸವಣ್ಣನವರು ಜಾತಿಮದದ ಸಮಾಜದ ಬದಲು ಜಾತಿಯ ನಿರಹಂಕಾರ ಸಮಾಜ ನಿರ್ಮಾಪಕರು. ಇದು ಅಶ್ರೌತ ಧರ್ಮದೃಷ್ಟಿ.

ಈ ಶಿವಾನುಭವಿಗಳಲ್ಲಿಯಂತೆ ಪಂಚರಾತ್ರಾಗಮ ಅನುಯಾಯಿಗಳಲ್ಲಿ ಒಬ್ಬರಾದ ರಾಮಾನುಜರಲ್ಲಿ ಮಿಂಚಿದ್ದುಂಟು. ಈ ಅಶ್ರೌತ ಪ್ರಜ್ಞಾ ಘಟನೆ ಹೀಗಿದೆ;

Dhanurdas was a Sudra. Often, Ramanuja was found returning from his river bath leaning on shoulders of Dhanurdas, a Sudra. This exercised the minds of his Brahmin discipiles very much. They once made bold to ask him for an explanation. Ramanuja said: "O Vaisnavas have you not heard that learning, riches, and high birth make one swell with pride, but adorn a wise man? Dhanurdas is utterly destitute of this three-fold vice vis, 'pride of learning. pride of wealth, and caste pride,' but you are affected by them intensely. The waters of the Cauvery wash my body clean, but my mind is cleaned by the touch of a devotee like him. ೯೭ ರಾಮಾನುಜರು ಕೂಡ ತಮ್ಮ ಶಿಷ್ಯರಲ್ಲಿದ್ದ ಜಾತಿಮದವನ್ನು ಎತ್ತಿ ತೋರಿಸಿ, ಅವರ ಈ ಅಜ್ಞಾನದ ವಿಚಾರವನ್ನು ಖಂಡಿಸಿದ್ದಾರೆ. ಇದು ಶ್ರೌತ ಪಂಚರಾತ್ರಾಗಮದ ಆಚಾರವಾಗದೆ, ಅಶ್ರೌತ ಪಂಚರಾತ್ರಾಗಮದ ಆಚಾರವಾಗಿದೆ.

ಆಚಾರ ವಿಚಾರಗಳಿಂದ ಬರಡಾದ ಶಾಸ್ತ್ರಗಳನ್ನು ಮಹಾತ್ಮರು ಅಥವ ಸತ್ಪುರುಷರು ತಮ್ಮ ಆಚಾರ ವಿಚಾರಗಳಿಂದ ಶ್ರೀಮಂತ ಗೊಳಿಸುವದು ಉಂಟು.

---

೯೭ M. Yamunacharya, Ramanuja's Teachings in his own words, p. 34 Bhavan's Book University (1970)

ಇದು ಕೇವಲ ಅಶ್ರೌತ ಮನೋಧರ್ಮದವರಿಂದ ಮಾತ್ರ ಸಾಧ್ಯ. ಹೊಸ ವಿಚಾರ ಆಚಾರಗಳ ಆಯಾಮದ ಸೃಷ್ಟಿ ಇವರಿಂದ ಮಾತ್ರ ಸಿದ್ಧಿ. ಈ ಮಾತಿಗೆ ಬಸವಣ್ಣನವರ ಮತ್ತು ರಾಮಾನುಜರ ಜೀವನ ಸಾಕ್ಷಿ.

ಬಸವಣ್ಣನವರು ಬೇರೊಂದೆಡೆಯಲ್ಲಿ ಸಂದರ್ಭಕ್ಕೆ ತಕ್ಕಂತೆ ಹೇಳಿದ್ದು ಗಮನಿಸಬೇಕಾದ ವಿಚಾರವಾಗಿದೆ. ಇದು ಕೂಡ ವಚನಾಗಮದ ಅಶ್ರೌತತೆಗೆ ಸಾಕ್ಷಿ.

ಸೆಟ್ಟಿ ಎಂಬೆನೆ ಸಿರಿಯಾಳನ ?
ಮಡಿವಳನೆಂಬೆನೆ ಮಾಚಯ್ಯನ ?
ಡೋಹರನೆಂಬೆನೆ ಕಕ್ಕಯ್ಯನ ?
ಆನು ಹಾರುವನೆಂದರೆ ಕೂಡಲ ಸಂಗಮದೇವ ನಗುವನಯ್ಯಾ ![೯೮]

ಸಿರಿಯಾಳ ಎಂಬ ಶಿವಭಕ್ತನು ವ್ಯಾಪಾರ ಉದ್ದಿಮೆಯನ್ನು ಮಾಡುವವನು. ಆದರೆ ಅವನು 'ಸೆಟ್ಟಿ' ಅಲ್ಲ! ಅಂದರೆ ಆತನ ಉದ್ಯೋಗವು ಒಂದು ಜಾತಿ ಎಂಬುದು ವ್ಯವಹಾರದಲ್ಲಿ ಗುರುತಿಸಲ್ಪಟ್ಟ ಮಾತು ಸರಿಯಲ್ಲ. ಈ ಬಗೆಯ ಜಾತಿ ಪದ್ಧತಿವಾದವನ್ನು ಬಸವಣ್ಣನವರು ತಿರಸ್ಕರಿಸಿದರು. ಅದೆ ರೀತಿ ಮಾಚಯ್ಯನು ಮಡಿವಾಳ ಅಂದರೆ ಬಟ್ಟೆಗಳನ್ನು ಮಡಿ ಮಾಡುವ ಕಾಯಕದವನು. ಆದರೆ ಬಟ್ಟೆಯನ್ನು ಮಡಿ ಮಾಡುವಂಥದೇ ಒಂದು ಜಾತಿಯೇನಲ್ಲ. ಆದರೆ ಜನರು ಈ ಕಾಯಕವನ್ನು ಸೂಚಿಸುವ ಶಬ್ದವನ್ನೇ ಜಾತಿ ಎಂದು ಬಗೆಯುವದನ್ನು ಬಸವಣ್ಣನವರು ಅಲ್ಲಗಳೆಯುತ್ತಾರೆ. ಕಕ್ಕಯ್ಯನು ಡೋಹರ ಕೆಲಸ ಮಾಡುವವನು. ಆತನ ಉದ್ಯೋಗವೇ ಒಂದು ಜಾತಿಯನ್ನಾಗಿ ಬಗೆಯುವದನ್ನು ಬಸವಣ್ಣನವರು ಒಪ್ಪುವದಿಲ್ಲ. ಚೆನ್ನಯ್ಯ ಮಾದರ ಕಾಯಕ ಮಾಡುವವನು. ಆದರೆ ಆ ಕಾಯಕವು ಜಾತಿವಾಚಕವಾಗಲಾರದೆಂಬುದು ಬಸವಣ್ಣನವರ ವಾದ. ಅದೇ ರೀತಿ ಬಸವಣ್ಣನವರನ್ನು ಯಾರಾದರೂ ಹಾರುವನೆಂದು ಕರೆದರೆ, ಹಾರುವ ಅಂದರೆ ಸ್ವರ್ಗಸುಖಕ್ಕೆ ಎಳಸುವದರಲ್ಲಿ ತೊಡಗುವ ವೃತ್ತಿಯನ್ನು ಒಂದು ಜಾತಿ ಎಂದು ಹೇಳುವದನ್ನು ತಿರಸ್ಕರಿಸುವರು. ಈ ಬಗೆಯ ಅಂದರೆ ಕಾಯಕವೇ ಜಾತಿ ಎಂದು ಪರ್ಯ್ಯಾಯಾರ್ಥದಲ್ಲಿ ಬಳಸುವದನ್ನು ದೇವರು ಮೆಚ್ಚನು ಎಂದು ಹೇಳುವ ಮೂಲಕ ಈ ಅನಿಷ್ಟ ಪದ್ಧತಿ ಮಾನವ ಮನದ ದೌರ್ಬಲ್ಯವೆಂದು ಅವರ ಮತ. ಆದರೆ ಉದ್ಯೋಗವು ಒಂದು ಜಾತಿಪದ್ಧತಿಯಾಗಿ ಮಾರ್ಪಟ್ಟ ವಿಷಯು ಬಹಳ ಹಳೆಯ ಕಾಲದಲ್ಲಿ. ಈ ಜಾತಿಪದ್ಧತಿಯು ಸಮಾಜದಲ್ಲಿ ಮೇಲು ಕೀಳು ಭಾವನೆಗೆ ಕಾರಣವಾಯಿತು. ಇದಕ್ಕೆ ಕಾರಣ ಉದ್ಯೋಗದಲ್ಲಿ ಕಲ್ಪಿಸಿಕೊಂಡ ಕೀಳು ಮೇಲು. ನಿಜವಾಗಿ

---

೯೮ ಎಸ್, ಎಸ್, ಬಸವನಾಳ, ಅದೆ, ವ ೩೪೪.

ನೋಡಿದರೆ ಉದ್ಯೋಗದಲ್ಲಿ ಕೀಳು ಮೇಲು ಎಂಬುದಿಲ್ಲ. ಆದರೆ ಮನುಷ್ಯನಲ್ಲಿರುವ ಅಹಂಕಾರವು ಈ ತಾರತಮ್ಯಗೆ ಕಾರಣ. ಇದು ಹೇಗೆಂದರೆ ತಾನು ಮಾಡುವ ಉದ್ಯೋಗ ಶ್ರೇಷ್ಠ ಎಂಬ ವಿಚಾರವು ಅಂಹಕಾರದಿಂದಾಗಿ ಪ್ರಾರಂಭವಾಯಿತು. ಈ ಜಾಡ್ಯವನ್ನು ಹೋಗಲಾಡಿಸುವ ಸಾರ್ವತ್ರಿಕ ಪ್ರಯತ್ನವು ೧೧ ಮತ್ತು ೧೨ ನೆಯ ಶತಮಾನಗಳಲ್ಲಿ ವಚನ ಬ್ರಹ್ಮರಿಂದ ಪ್ರಾರಂಭವಾಯಿತು. ಇದರ ಆಚಾರ್ಯ ಮಹಾತ್ಮ ಬಸವಣ್ಣನವರು ಎಂಬುದಕ್ಕೆ ಮೇಲಿನ ವಚನವೇ ಸಾಕ್ಷಿ. ಬಸವಣ್ಣನವರಲ್ಲಿಯ ಇದು ಕ್ರಾಂತಿಕಾರಕ ಭಾರತೀಯ ಪುರಾತನ ಪ್ರತಿಭೆಯ ದ್ಯೋತಕವಾಗಿದೆ. ಅವರು ಈ ಜಾಡ್ಯವನ್ನು ಹೊಡೆದೋಡಿಸಲೋಸುಗ ಪ್ರತಿಜ್ಞೆಯನ್ನೆ ಕೈಕೊಳುವರು.

ದೇವಸಹಿತ ಭಕ್ತ ಮನೆಗೆ ಬಂದಡೆ,
ಕಾಯಕವಾವುದೆಂದು ಬೆಸಗೊಂಡೆನಾದಡೆ
ನಿಮ್ಮಾಣೆ! ನಿಮ್ಮ ಪುರಾತರಾಣೆ!
ತಲೆದಂಡ, ತಲೆದಂಡ !
ಕೂಡಲಸಂಗಮದೇವಾ, ಭಕ್ತರ
ಕುಲವನರಸಿದರೆ ನಿಮ್ಮ ರಾಣಿವಾಸದಾಣೆ ! ೯೯

ಕಾಯಕ ಹಿಡಿದು ಕುಲವನರಸುವ ಈ ಅನಿಷ್ಟ ಪದ್ಧತಿಯನ್ನು ಹೋಗಲಾಡಿಸಲು ಹೋರಾಡಿದ ವಿಶ್ವದ ಪ್ರಥಮ ವ್ಯಕ್ತಿ. ಇದು ವಚನಾಗಮದ ಅಶ್ರೌತದೃಷ್ಟಿಗೆ ಪರಮ ಶ್ರೇಷ್ಠವಾದ ಸಾಕ್ಷಿಯಾಗಿದೆ.

ಉಪನಿಷತ್ಕಾಲದ ನಂತರದ ವರ್ಣವ್ಯವಸ್ಥೆಯನ್ನು ಉಗ್ರವಾಗಿ ಪ್ರತಿಭಟಿಸಿರುವವರು ವಚನಾಗಮ ಬ್ರಹ್ಮರುಗಳು. ಆರನೆಯ ಶತಮಾನದಿಂದ ೧೧ ಮತ್ತು ೧೨ನೆಯ ಶತಮಾನಗಳ ವರೆಗೆ ಅವ್ಯಾಹತವಾಗಿ ನಡೆದ ವರ್ಣಸಂಕರ ಮತ್ತು ಕರ್ಮಸಂಕರಗಳಿಂದ ಕಂಗೆಟ್ಟ ಪುರಾಣ-ಹಿಂದೂ ಧರ್ಮ ಸಮಾಜದ ಕಾಯಕಲ್ಪ ಇವರಿಂದ ಆಯಿತೇ ವಿನಾ ಶ್ರೌತಾಗಮಪರಾಯಣರಿಂದ, ಅವರನ್ನು ಬೆಂಬಲಿಸಿದ ರಾಜರುಗಳಿಂದ ಆಗಲಿಲ್ಲವೆಂಬುದನ್ನು ಭಾರತೀಯ ಸಾಂಸ್ಕೃತಿಕ ಚರಿತ್ರೆಯು ಗುರುತಿಸದಿರುವದು ದುರದೃಷ್ಟದ ಸಂಗತಿ. ಇತಿಹಾಸ ತಜ್ಞರು ಇಂಥ ಮಹತ್ವದ ಕಾರ್ಯವನ್ನು ಅಲಕ್ಷ ಮಾಡಿದ್ದಾರೆಂದು ಹೇಳಿದರೆ, ಕೇಳಲಿಕ್ಕೆ ಕರ್ಕಶವಾಗಿದೆ ಎಂಬ ಅವರು ಸತ್ಯವನ್ನು ತೆಗಳಿದಂತೆಯೆ. ಇಂಥ ಇನ್ನೊಂದು ಉದಾಹರಣೆಯೆಂದರೆ ಕಿತ್ತೂರ ಚನ್ನಮ್ಮ ಬ್ರಿಟಿಷರೊಡನೆ ಮಾಡಿದ ಯುದ್ಧವು ಸ್ವಾತಂತ್ರ್ಯ ಸಂಗ್ರಾಮವಲ್ಲ, ಅದು ತನ್ನ ಸಂಸ್ಥಾನ ರಕ್ಷಣೆಯ ಹೋರಾ

೯೯ ಎಸ್. ಎಸ್. ಬಸವನಾಳ (ಸಂ) ಅದೆ ವ ೪ ೨
ಎಲ್. ಇ ಅಸೋಸಿಯೇಶನ್ (೧೯೬೨)

ಟವೆಂದು ಬರೆಯುವದು ನಾಚಿಗ್ಗೇಡು. ಸಾಮಾಜಿಕ, ರಾಜಕೀಯ ಮುಂತಾದ ಹೋರಾಟಗಳು ಭಾರತೀಯತೆಯ ನಿತ್ಯ ನವೀನ ಮೂಲಪ್ರತಿಭೆಯ ದ್ಯೋತಕವೆಂಬುದನ್ನು ಮರೆಯಲಾಗದು. ಭಾರತದಂಥ ಆಧ್ಯಾತ್ಮಿಕ ಮನೋವೃತ್ತಿಯ ದೇಶ ಜಗತ್ತಿನಲ್ಲಿ ನಡೆಯುವ, ಅದೇ ರೀತಿ ಭಾರತದಲ್ಲಿ ನಡೆಯುವ ದಾಸ್ಯ ಮೂಢನಂಬಿಕೆ, ಜಾತಿವಾದ ಮುಂತಾದ ಅನಿಷ್ಟಗಳ ವಿರುದ್ಧ ಹೋರಾಡುವ ಮನೋನಿರ್ಧಾರವನ್ನು ತೋರಿಸದಿದ್ದರೆ ಕತ್ತಲೆ ಯುಗಕ್ಕೆ ಆಮಂತ್ರಣವಿತ್ತಂತೆಯೆ. ಮಹಾತ್ಮಾಗಾಂಧಿಯವರಿಗಿಂತ ಎಂಟುನೂರು ವರ್ಷಗಳ ಪೂರ್ವದಲ್ಲಿ ಜಾತಿವಾದವನ್ನು, ಉದ್ಯೋಗಮೂಲ ಜಾತಿವಾದವನ್ನು, ಕೆಲಸಗಳಲ್ಲಿರುವ ಮೇಲು ಕೀಳು ಭಾವನೆಯನ್ನು ಹೋಗಲಾಡಿಸಲು ವಿಸ್ತೃತವಾದ ಹೋರಾಟವನ್ನು ಮಾಡಿದವರು ಶಿವಶರಣರು ಮತ್ತು ಅವರ ಮುಖಂಡರಾದ ಬಸವಣ್ಣನವರು. ಈ ಪುರಾತನ ಕ್ರಾಂತಿಕಾರಕ ಪ್ರತಿಭೆಯ ಇನ್ನೊಂದು ಹೆಸರು ಅಶ್ರೌತದೃಷ್ಟಿ.

**ಪೂರ್ವ ಮೀಮಾಂಸದೊಡನೆ ಹೋರಾಟ :**

ಯಜ್ಞಯಾಗಾದಿಗಳಿಂದ, ತನ್ಮೂಲಕ ಸೀಮಿತ ಅರ್ಥದಲ್ಲಿ ಮಾಡುವ ಹಿಂಸೆ (ಪ್ರಾಣವಧೆ)ಯನ್ನು, ಇಹ ಮತ್ತು ಪರದ ಸುಖಗಳ ಮೋಹದತ್ತ ಎಳೆದು ಭವಚಕ್ರದಲ್ಲಿ ಜನರು ಬೀಳುವಂತೆ ಮಾಡುವ ಕಾರ್ಯವನ್ನು, ದೇವರ ಅಸ್ತಿತ್ವವನ್ನು ಅಲ್ಲಗಳೆಯುವದನ್ನು ಮಾಡುವ ಮುಖಂಡತ್ವ ಪೂರ್ವಮೀಮಾಂಸದ್ದು. ಈ ಮುಖಂಡತ್ವವು ಬಹಳ ಪ್ರಬಲವಾದುದಾಗಿತ್ತು ಆರು ಮತ್ತು ಏಳನೆಯ ಶತಮಾನ *ಗಳಲ್ಲಿ. ಭಯಂಕರವಾದ ಈ ಮುಖಂಡತ್ವವನ್ನು ಎದುರು ಹಾಕಿಕೊಂಡದ್ದು ಸತ್ಯ ಶುದ್ಧ ಧರ್ಮನಿಷ್ಠೆಯ ಪ್ರತಿಭೆಯು.

...ಹೋಮದ ನೇಮದಲ್ಲಿ ಹೋತನ ತಿಂಬ
ಅನಾಮಿಕರೊಡನಾಡಿ ಗೆಲವುದೇನು ಕೂಡಲ ಸಂಗಮ ದೇವ ೧೦೦

---

೧೦೦ ಎಸ್. ಎಸ್. ಬಸವನಾಳ ಆದೇ ವ. ೫೭೮ (1962)

* ..."the Vedic rituals and sacrifices once more gained a position of honour and spread among the masses. As they won their admiration, Kumarila Bhatta aimed at beating the Buddhists at their own game." Swamy Atmananda, Sankara's Teachings in his own words, p. 39 (1964)

ಹೋಮ ಯಜ್ಞ ಯಾಗಗಳನ್ನು ಪ್ರತಿಪಾದಿಸುವವರೇ ಪೂರ್ವಮೀಮಾಂಸಕರು. ಈ ವಚನವು ಅವರನ್ನು ಕುರಿತೇ ಇರುತ್ತದೆ. ಇನ್ನೊಂದು ವಚನದಲ್ಲಿ ಅವರು ನಾಸ್ತಿಕ ವಾದದ ವಿರುದ್ಧ ರಣರಂಗಕ್ಕಿಳಿದದ್ದನ್ನು ನೋಡುತ್ತೇವೆ. ಅದು ಹೀಗಿದೆ–

"ಈಶ್ವರ ಸದ್ಭಾವೇ ಕಿಂ ಪ್ರಮಾಣಂ" ಎಂಬ ಮೀಮಾಂಸಕನ
ಮೂಗಿನ ಕೊನೆಯನು
"ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಬಾಹುರುತ
ವಿಶ್ವತಸ್ಪಾತ್ । ಸ ಬಾಹುಭ್ಯಾಂ ಧಮತಿ ಸಂ ಪತತ್ರೈರ್
ದ್ಯಾವಾಭೂಮೀ ಜನಯನ್ ದೇವ ಏಕಃ"
ಎಂಬ ಸುರಗಿಯಲಿರಿದು,
ವೈಶೇಷಿಕವೆಂಬ ಇಟ್ಟಿಗೆಯಲೊರಸಿ,
ಕೂಡಲಸಂಗಯ್ಯನೆಂಬ ಕನ್ನಡಿಯ ತೋರುವೆನು !೧೦೧

ಬಸವಣ್ಣನವರು ಒಬ್ಬ ತಜ್ಞ ಯಶಸ್ವೀ ಜನಹಿತಪರ ಆಡಳಿತಗಾರರಾಗಿದ್ದಂತೆ, ಒಬ್ಬ ತಜ್ಞರಾದ ವಾದವಿದ್ಯಾ ವಿದ್ವನ್ಮಣಿಗಳೂ ಆಗಿದ್ದರೆಂಬುದನ್ನು ಈ ವಚನವು ತೋರಿಸುತ್ತದೆ. ವೇದವನ್ನೇ ಪ್ರಮಾಣವನ್ನಾಗಿ ಬಸವಣ್ಣನವರು ಈ ವಾದದಲ್ಲಿ ಬಳಸಿದ್ದಾರೆ. ಯಾಕಂದರೆ ವೇದ ಪ್ರಾಮಾಣ್ಯವನ್ನು ಮೀಮಾಂಸಕರು ಮನ್ನಿಸುವವರು; ವೈಶೇಷಿಕವೆಂಬ ದರ್ಶನವು ಮೀಮಾಂಸದ ಉದರದಲ್ಲಿಯೇ ಹುಟ್ಟಿದ್ದು. ಮೀಮಾಂಸ ಮತ್ತು ವೈಶೇಷಿಕಗಳು ತಿಳಿಸುವ ಪದಾರ್ಥಗಳ ವಿಚಾರದಲ್ಲಿ ಏಕತೆ ಕಂಡುಬರುತ್ತದೆ. ಮೀಮಾಂಸಾ ಶಾಸ್ತ್ರದ ಆಕರಗಳಾದ ಬ್ರಾಹ್ಮಣಗಳಲ್ಲಿಯ ಸಿದ್ಧಾಂತಗಳೆಲ್ಲ ವೈಶೇಷಿಕ ದರ್ಶನದ (ಅಣ್ವೀಕ್ಷಿಕೀಯ)ವೇ ಆಗಿವೆ. ಯಾಜ್ಞವಲ್ಕ್ಯಸ್ಮೃತಿಯು ಈ ಕಾರಣಕ್ಕಾಗಿ ನ್ಯಾಯವು ಮೀಮಾಂಸದೊಡನೆ ಸೇರಿಕೊಂಡಾಗಲೇ ವಿಜ್ಞಾನವೆಂದು ಹೆಸರು ಪಡೆಯಿತು ಎಂದು ಹೇಳುತ್ತದೆ.೧೦೨ ಶಿವನೇ ವೈಶೇಷಿಕ ದರ್ಶನ ಸೂತ್ರಗಳನ್ನು ತಿಳಿಸಿದ್ದನ್ನು ಪ್ರಶಸ್ತಪಾದನು ತಿಳಿಸುತ್ತಾನೆ. ಅಂದರೆ ವೈಶೇಷಿಕ ದರ್ಶನ೧೦೩ ಶಿವಪರಮಾತ್ಮ ಬೋಧಿಸಿದ್ದು. ಈ ದರ್ಶನದ ಪದಾರ್ಥ ತತ್ತ್ವವನ್ನು ಮೀಮಾಂಸವು ೧೦೪ ಸ್ವೀಕರಿಸಿದೆ. ಈ ರೀತಿಯಲ್ಲಿ ವೈಶೇಷಿಕಕ್ಕೆ ಮೀಮಾಂಸವು

---

೧೦೧ ಎಸ್. ಎಸ್. ಬಸವನಾಳ, ,, ವ. ೭೪೭.

೧೦೨ Dr A. B. Keith, Indian Logic and Atomism, p. 11 Oxford Press (1921)

೧೦೩ Dr A. B. Keith, Indian Logic and Atomism, p. 20 Oxford Press (1921)

೧೦೪ Dr A. B. Keith Indian Logic and Atomism, P. 180 ff note 3 Oxford Press (1921)

ಋಣಿಯಾಗಿದೆ.[೧೦೫] ವೈಶೇಷಿಕವು ಶಿವಪರಮಾತ್ಮನ ಸೂತ್ರ ಬೋಧನೆಯನ್ನು ಒಪ್ಪಿಕೊಳ್ಳುವದಾದ್ದರಿಂದ ಅದರಂತೆ ಅದರ ಕರ್ತೃವಾದವನನ್ನು ಇದೂ ಕೂಡ ಒಪ್ಪಿಕೊಳ್ಳಬೇಕು ಅಂದರೆ ಈಶ್ವರ ಸದ್ಭಾವವನ್ನು ಒಪ್ಪಿಕೊಳ್ಳಲೇ ಬೇಕು ಎಂಬುದೇ ಬಸವಣ್ಣನವರ ಮಾತಿನ ಧ್ವನಿ. ಈ ತರ್ಕಶುದ್ಧ ವಿಚಾರವಾದವೇ ಅಶ್ರೌತತೆಯಾಗಿದೆ. ಅವರ ಈ ವಾದ ಸ್ವರೂಪದಲ್ಲಿ ಅಶ್ರೌತ ದೃಷ್ಟಿಯು ಕಂಡು ಬರುತ್ತದೆ.

ಆಳಿಗೊಂಡಿಹರೆಂದು ಅಂಜಲದೇಕೆ ?
ನಾಸ್ತಿಕವಾಡಿಹರೆಂದು ನಾಚಲದೇಕೆ ?
ಆರಾದೊಡಾಗಲಿ ಶ್ರೀಮಹಾದೇವಂಗೆ ಶರಣೆನ್ನಿ.
ಏನೂ ಅರಿಯೆನೆಂದು ಮೌನಗೊಂಡಿರಬೇಡ : *
ಕೂಡಲಸಂಗಮ ದೇವರ ಮುಂದೆ "ದಂದಣ ದತ್ತಣ" ಎನ್ನಿ. ಬ. ವ. ೧೭೬.

ಈ ವಚನದಲ್ಲಿ ಕೂಡ ಅತ್ಯಂತ ಆಮೂಲಾಗ್ರ ಸುಧಾರಣಾವಾದದ ಅಂಶವು ಕಂಡು ಬರುತ್ತದೆ. ಶಾಸ್ತ್ರ ಸಮ್ಮತವಾದ ಅನೇಕ ಮಾರ್ಗಗಳು ಅಥವ ಸಾಧನಗಳು ದೇವರನ್ನೊಲಿಸಲು ಇರುತ್ತವೆ. ಆದರೆ ಶಾಸ್ತ್ರವನ್ನು ಓದಲರಿಯದವರದೇ ಬಹು ದೊಡ್ಡದಾದ ಹೆಚ್ಚು ಸಂಖ್ಯೆಯ ಸಮಾಜ. ಅರಿತವ ಮತ್ತು ಅರಿಯದವ ಎಂಬ ಭೇದವನ್ನೇ ಇಂಥ ಭಕ್ತಿಯ ಉಪಾಯದಿಂದ ತೆಗೆದು ಹಾಕಲು ಸೂಚಿಸಿದ ಪರಿಹಾರವು ಅದ್ವಿತೀಯವಾಗಿದೆ. ಶಾಸ್ತ್ರದ ಮುಖವನ್ನೂ ನೋಡದ ಅವಿದ್ಯಾವಂತರಿಗಾಗಿ ಸೂಚಿಸಿದ ಮಾರ್ಗವು ಶಾಸ್ತ್ರ ಸಮ್ಮತವಲ್ಲವೆಂದು ಬೇರೆ ಹೇಳಲೇ ಬೇಕಿಲ್ಲ. ಈ ಅಶಾಸ್ತ್ರೀಯ ಸಾಧನ ಮಾರ್ಗವನ್ನು ಅವಿದ್ಯಾವಂತರಿಗೆಯೇ ಪ್ರಬೋಧಿಸಿದ ವಚನಾಗಮವು, ಭಾರತೀಯ ಸಾಧನಮಾರ್ಗ ಚರಿತ್ರೆಯಲ್ಲಿಯೇ ಕ್ರಾಂತಿಯನ್ನುಂಟುಮಾಡಿದೆ. ಇದು ವಚನಾಗಮಕ್ಕೆ ಸಂದ ಹಿರಿಮೆ. ಇದು ಅಶ್ರೌತ ದೃಷ್ಟಿಯ ಫಲ.

**ಜಾತಿ ಮದ ಖಂಡನೆ**

ಹಾರುವನ ಭಕ್ತಿ, ಓಡಿನೊಳಗಗೆಯ ಹೊಯಿದಂತೆ
ಕೆಳಯಿಂಕೆ ಬೇರೂರದು, ಮೇಲೆ ಫಲವಾಗದು !

೧೦೫ Prof. M. Hiriyanna, outlines of Indian philosoby, P. 300 George Allen & Unwin (1958)

* ಯೋಽರ್ಚಯಂತಿ ಪರಾಂ ಶಕ್ತಿಂ ವಿಧಿನಾಽವಿಧಿನಾಪಿವಾ ।
ನ ತೇ ಸಂಸಾರಿಣೋ ನೂನಂ ಮುಕ್ತಾ ಏವ ನ ಸಂಶಯಃ ॥೨೪॥
ಶ್ರೀಲಲಿತೋಪಾಖ್ಯಾನಂ ಪ್ರಥಮೋಽಧ್ಯಾಯಃ

ಪ್ರಾಣಲಿಂಗದ ಪ್ರಸಾದವ ಮುಂದಿಟ್ಟುಕೊಂಡು
'ಪ್ರಾಣಾಯ ಸ್ವಾಹಾ, ಅಪಾನಾಯ ಸ್ವಾಹಾ, ವ್ಯಾನಾಯಸ್ವಾಹಾ
ಉದಾನಾಯ ಸ್ವಾಹಾ, ಸಮಾನಾಯ ಸ್ವಾಹಾ'
ಎಂಬ ಕರ್ಮಿಗಳನೇನೆಂಬೆ, ಕೂಡಲ ಸಂಗಮದೇವಾ ? ಬ ವ ೫೯೩
ಜಾತಿವಿಡಿದು ಸೂತಕವನರಸುವೆ :
ಜ್ಯೋತಿ ವಿಡಿದು ಕತ್ತಲೆಯನರಸುವೆ !

ಇದೇಕೋ ಮರುಳ ಮಾನವಾ?
ಜಾತಿಯಲ್ಲಿ ಅಧಿಕನೆಂಬೆ
ವಿಪ್ರ ಶತಕೋಟಿಗಳಲ್ಲಿದ್ದು ಫಲವೇನು?....ಬ. ವ. ೫೯೬

ಜಾತಿಯ ವಿಚಾರವು ಉಚ್ಚ ಕುಲದವರಲ್ಲಿರುವದನ್ನಿದು ತಿಳಿಸುತ್ತದೆ. ಅದು ಅರ್ಥ ಹೀನ ಎಂಬುದು ವಚನಗಳ ಇಂಗಿತ. ಇದು ಅಂದರೆ ಕುಲಮದವು ಶ್ರೌತದೃಷ್ಟಿ ಅಂದರೆ ವರ್ಣಧರ್ಮದ ಹುಚ್ಚು ಹಿಡಿದವರ ವಿಚಾರ. ಇದು ವಿಚ್ಛಿದ್ರಕಾರಿ ವೃತ್ತಿ ಎಂಬುದನ್ನು ವಚನಾಗಮವು ಪ್ರಬೋಧಿಸುತ್ತದೆ. ಸ್ವಧರ್ಮ ಬಾಂಧವರನ್ನು ಅಗೌರವದಿಂದ ಕಾಣುವ ಈ ದೃಷ್ಟಿಯು ತ್ರಿಕಾಲದಲ್ಲಿಯೂ ತಿರಸ್ಕರಣೀಯ ಎಂಬುದನ್ನು ಇಲ್ಲಿ ನೋಡುತ್ತೇವೆ. ಹೀಗೆ ಹಾನಿಯನ್ನು ಗುರುತಿಸುವುದೇ ಅಶ್ರೌತ ಮನೋಧರ್ಮ. ಈ ಅಶ್ರೌತ ಮನೋಧರ್ಮವು ಶಂಕರಾಚಾರ್ಯರನ್ನು, ರಾಮಕೃಷ್ಣ ಪರಮ ಹಂಸರನ್ನು ಆತ್ಮವಂಚನೆಯಿಂದ ರಕ್ಷಿಸಿದ್ದನ್ನು ನೋಡಬಹುದು–

"Even though an Advaitin who saw all the world as Brahman one day due to the force of his ingrained habit as a son of Keral Brahmin, he called on a Chandala to move off his path. The Chandala asked him whom he calling off to move, the body or the soul? This opened the eyes of Sankara and he fell at once at the feet of the Chandala as if he were his Guru and composed the famous 'Manishapanchaka' of 5 slokas which have a refrain "he who has learnt who look upon all as Brahman, is really my Guru be a Chandala or a Brahmin,"೧೦೬

---

೧೦೬ Swami Atmananda, Sankara's Teachings in his own words, p 34. Bhavans Books University (1964).

ಇದು ಅನುವಂಶಿಕವಾಗಿ ಸಹಜ ಪ್ರವೃತ್ತಿಯಾಗಿ ಬಂದ ಶ್ರೌತದೃಷ್ಟಿಯ (ವರ್ಣಕರ್ಮ ಸಂಸ್ಕೃತಿಯ ಮನೋಧರ್ಮದ) ಪ್ರಭಾವದ ಪರಿಣಾಮವಾಗಿರುವದರ ದ್ಯೋತಕವಾಗಿದೆ. ಶಂಕರರು ಚಾಂಡಾಲನಿಗೆ ದಾರಿ ಬಿಟ್ಟು ದೂರ ಸರಿ ಎಂದದ್ದು ಶಂಕರಾಚಾರ್ಯರಂಥ ಹೆಸರಾಂತ ಬ್ರಹ್ಮಜ್ಞಾನಿಯವರಿಗೆ ಕೂಡ ಮರವೆ ಬರುವಂತೆ ಮಾಡಿದ ಸಂಸ್ಕಾರವಾದ ಶ್ರೌತ-ಶಕ್ತಿಯನ್ನು ಬಸವಣ್ಣನವರು ಸದಾಕಾಲ, ಜಾಗ್ರತ ಸ್ವಪ್ನ, ಮತ್ತು ಸುಷುಪ್ತಿಗಳಲ್ಲಿ, ಹತ್ತಿರ ಸುಳಿಯದಂತೆ ನೋಡಿಕೊಂಡರಲ್ಲದೆ ಅದರ ಹುಟ್ಟನ್ನಡಗಿಸಿದ ಕ್ರಾಂತಿಕಾರಿ ಅದ್ವಿತೀಯ ಅಶ್ರೌತವಾದಿ. ಶ್ರೌತದ ಪ್ರಾಬಲ್ಯವನ್ನು ಅತ್ಯಂತ ಪ್ರಬಲವಾಗಿ ಪ್ರಖರವಾಗಿ ನಿಷ್ಠುರವಾಗಿ ಖಂಡನೆಯು ವಚನಾಗಮ ಕರ್ತೃಗಳಿಂದಾಗಿರುವದು. ಆಸ್ತಿಕ ಪ್ರಮಾಣ ಸಾಹಿತ್ಯವಾಗಿ ಬೆಳೆದು ಬಂದ ವಚನಾಗಮವು ವರ್ಣಧರ್ಮವನ್ನು, ವರ್ಣಕರ್ಮವನ್ನು, ಮತ್ತು ವೇದವನ್ನು ಖಂಡಿಸಿ ಭಾರತೀಯ ಆಧ್ಯಾತ್ಮ ಧರ್ಮಚರಿತ್ರೆಯಲ್ಲಿಯ ಗೆಲ್ಲುಗಂಬವಾಗಿ ಉಳಿದಿದೆ.

ರಾಮಕೃಷ್ಣ ಪರಮಹಂಸರ ಜೀವನದಲ್ಲಿಯೂ ಇಂಥ ಒಂದು ಘಟನೆ ಇದ್ದಂತೆ ನೆನಪಿಗೆ ಬರುತ್ತದೆ. ಅವರು ಒಂದು ದಿನ ಒಬ್ಬ ಮಿಠಾಯಿಯ ಕೈಗಾಡಿಯವನು ಕೂಗಿಕೊಂಡು ಹೊರಟಾಗ ಮಿಠಾಯಿ ಕೊಳ್ಳಬೇಕೆಂದು ಆತನನ್ನು ಕರೆದರು. ಆದರೆ ಅವರಿಗೆ ಆ ವ್ಯಾಪಾರಿ ಮಹಮದಿಯ, ತಾವು ಬ್ರಾಹ್ಮಣರೆಂಬ ಅರಿವು ಜಾಗೃತ ವಾಯಿತು. ಆತನಿಗೆ ಬೇಡ ಹೋಗು ಎಂದು ಹೇಳಿದರು. ಹೀಗೆ ಹೇಳಹಚ್ಚಿದ್ದು ತಾವು ಬ್ರಾಹ್ಮಣರು, ಉಚ್ಚ ಕುಲದವರು ಎಂಬ ಸ್ಮರಣೆ. ಆದರೆ ಮರುಕ್ಷಣದಲ್ಲಿ ಅವರಿಗೆ ತಾವು ವರ್ಣಾಶ್ರಮಗಳನ್ನು ಮೀರಿದ ಬ್ರಹ್ಮಜ್ಞಾನಿ ಎಂಬ ಎಚ್ಚರ ಜಾಗೃತ ವಾಯಿತು. ಪುನಾ ಆತನನ್ನು ಕರೆದು ಮಿಠಾಯಿ ಕೊಂಡು ಕೊಂಡರು. ಮೊದಲನೆಯ ವಿಚಾರ ಶ್ರೌತ ಮನೋಧರ್ಮದ್ದು. ಎರಡನೆಯ ವಿಚಾರ ಅಶ್ರೌತ ಮನೋ ಧರ್ಮದ್ದು,

ಮಹಾತ್ಮಾ ಗಾಂಧಿಯವರಲ್ಲಿ ಸಹಜವಾದ ಅಶ್ರೌತ ಮನೋಧರ್ಮ ಇತ್ತು. ಅವರು ಉತ್ತಮ ವರ್ಣದವರಲ್ಲದ್ದರಿಂದಲೂ, ಅವರು ಬಾಲ್ಯದಿಂದಲೂ ಬೇರೆ ವರ್ಣದವರ ಮತ್ತು ಹಿಂದೂ ಧರ್ಮದ ಶೂದ್ರಾದಿ ವರ್ಣದವರ ಸಖ್ಯ ಹೊಂದಿ ರುವುದು ಹಾಗೂ ಅಶ್ರೌತವನ್ನು ತಿಳಿಸಿದ ಭಗವದ್ಗೀತೆಯಂತೆ, ಈಶಾವಾಸ್ಯಾದಿ ಉಪನಿಷತ್ತುಗಳ ಬೋಧೆಯಂತೆ ಬದುಕಿದ್ದೂ ಅದಕ್ಕೆ ತಕ್ಕ ಆಚಾರವನ್ನು ಅಳವಡಿಸಿ ಕೊಂಡದ್ದೂ ಈ ಅಶ್ರೌತಪ್ರತಿಭೆ ಸಹಜ ಜಾಗೃತವಾಗಲು ಕಾರಣವಾಯಿತು. ಆತ್ಮ ಬಲಿದಾನಕ್ಕೆ ಸಿದ್ಧಗೊಳಿಸಿದ್ದು ಕೂಡ ಈ ಅಶ್ರೌತ ಮನೋಧರ್ಮವೆ. ಬಸವಣ್ಣನವರು ಉಚ್ಚ ಕುಲಜರು. ಗಾಂಧೀಜಿ ಹಾಗಲ್ಲ. ಇದು ಧಾರ್ಮಿಕ ಹಿನ್ನೆಲೆಯ ಅಂತರ ಅವರು ಈರ್ವರಲ್ಲಿ.

**ಚತುರ್ವಿಧ ಪದವಿ ಮತ್ತು ಫಲಗಳ ಖಂಡನೆ :**

ಋಗ್ವೇದದಲ್ಲಿಯ (೧.೧೬೪.೩೦) ಮಂತ್ರ 'ದ್ವಾಸುಪರ್ಣಾ ಸಯುಜಾ ಸಖಯಾ....' ಎಂಬುದು ಫಲಭೋಗದ ಖಂಡನೆಯನ್ನು ಮಾಡಿದೆ. ಈ ಫಲ ಭೋಗದ ಖಂಡನೆಯೇ ಅಶ್ರೌತತೆ. ಈ ರೀತಿಯ ಖಂಡನೆಯನ್ನು ವಚನಾಗಮವು ಸುಪ್ರಸಿದ್ಧವಾಗಿ ಮಾಡಿದೆ, ಜನಪ್ರಿಯಗೊಳಿಸಿ ಭೋಗಲಾಲಸತೆಯಿಂದ, ಅದರ ಆಕರ್ಷಣೆಯಿಂದ ವಿಮುಖಗೊಳಿಸಿದೆ.

ಈ ಲೋಕದ ಭೀತರು; ಆ ಲೋಕದ ಕಲಿಗಳು.
ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯರೆಲ್ಲರು ಅಜಾತಂಗೆ ಸರಿಯೆ ?
ಮೂಜಗದಲ್ಲಿ ನಿರತರು ಕೂಡಲಸಂಗನ ಶರಣರು
ತ್ರಿವಿಧವನರಿಯರು. ೧೦೭

ಇವುಗಳು ವಚನಶಾಸ್ತ್ರದ ಪ್ರಕಾರ ಚತುರ್ವಿಧ ಫಲಗಳು. ಇವುಗಳು ಕೂಡ ಅವರಿಗೆ ಅಗ್ರಾಹ್ಯ. ತಾನೇ ಪರಶಿವ ಎಂಬ ಅರಿವೇ ಶಿವ ಜೀವ (ಲಿಂಗ ಅಂಗ) ಸಾಮರಸ್ಯ. ಇದು ವಚನಾಗಮ ಗುರುತಿಸಿದ ಫಲ. ಇದರಿಂದಧಿಕ ಇನ್ನೊಂದಿಲ್ಲ ಎಂಬುದು ಇದರ ನಿರ್ಣಯ. ಇದು ಅದರ ಅಶ್ರೌತ ಪ್ರಣಾಲಿ. ಕರ್ಮ, ಕರ್ಮ ಫಲ, ಅದರ ಭೋಗಗಳನರಿಯದಿರುವುದೆ ಅಶ್ರೌತ ದೃಷ್ಟಿ.

ಇನ್ನೊಂದೆಡೆಯಲ್ಲಿ ವಚನಾಗಮ ಧುರೀಣರಾದ ಬಸವಣ್ಣನವರು ಹೀಗೆ ಹೇಳುತ್ತಾರೆ. ಇದು ಪದವಿಗಳ ಮೋಹ ಮುಕ್ತ ವಿಚಾರವಾದ.

ಬ್ರಹ್ಮ ಪದವಿಯನೊಲ್ಲೆ, ವಿಷ್ಣು ಪದವಿಯನೊಲ್ಲೆ,
ರುದ್ರ ಪದವಿಯನೊಲ್ಲೆ,
ಮತ್ತಾವ ಪದವಿಯನೊಲ್ಲೆನಯ್ಯಾ !
ಕೂಡಲಸಂಗಮದೇವಾ, ನಿಮ್ಮ ಸದ್ಭಕ್ತರ
ಪಾದವನರಿದಿಪ್ಪ ಮಹಾಪದವಿಯನೆ ಕರುಣಿಸಯ್ಯಾ ! ೧೦೮

ಈ ಪದವಿಗಳಿಗಾಗಿ ಪೈಪೋಟಿ ದೇವ, ದಾನವ, ಮತ್ತು ಮಾನವರಲ್ಲಿ ನಡೆದುದನ್ನು ಪುರಾಣಗಳು ತಿಳಿಸುತ್ತವೆ. ಇವುಗಳ ಸಂಪಾದನೆಗಾಗಿ ಯಜ್ಞ ಯಾಗಾದಿಗಳನ್ನು

---

೧೦೭ ಎಸ್. ಎಸ್. ಬಸವನಾಳ (ಸಂ), ಬಸವಣ್ಣನವರ ವಚನಗಳು, ವ. ೬೦೧
ಎಲ್. ಇ. ಅಸೋಸಿಯೇಶನ್ ಧಾರವಾಡ (1962)
೧೦೮ ಎಸ್. ಎಸ್. ಬಸವನಾಳ (ಸಂ) ಬಸವಣ್ಣನವರ ವಚನಗಳು, ವ. ೩೬೦

ಮಾಡಿದ್ದು ಸುಪ್ರಸಿದ್ಧ. ಈ ಯಜ್ಞ, ಯಾಗಾದಿಗಳು, ದಾನ, ಧರ್ಮಗಳು ಈ ಪದವಿಗಳನ್ನು ಸಂಪಾದಿಸಿಕೊಡುವ ಸಾಧನಗಳು. ಆದರೆ ಈ ಪದವಿಗಳು ಕ್ಷಣಿಕವಾದವುಗಳೆಂಬುದು ಕೂಡ ಆ ಪೈಪೋಟಿಯಷ್ಟೇ ಸುಪ್ರಸಿದ್ಧ. ಇಂಥ ಬಯಕೆಯು ಜನನ ಮರಣ ರಹಿತವಾದ ಸ್ಥಿರಮುಕ್ತಿಯ ಅಂದರೆ ಆತ್ಮ ಸಾಕ್ಷಾತ್ಕಾರದ ಮತ್ತು ಆತ್ಮ ಮತ್ತು ಬ್ರಹ್ಮಗಳಲ್ಲಿ ಭೇದವಿಲ್ಲ ಎಂಬ ಪ್ರಣಾಲಿಯ ಆಚರಣೆಯತ್ತ ಜನರ ಗಮನವನ್ನು ಸೆಳೆದುದು ವಚನಾಗಮ. ಇದು ಪ್ರಜಾತಂತ್ರದಂಥ ಸಕಲ ಜೀವಾತ್ಮರ ಲೇಸದ ಅಶ್ರೌತಪ್ರಣಾಲಿಯು.

## ಅಶ್ರೌತಪ್ರಣಾಲಿಯು ಪ್ರತಿಪಾದಿಸಿದ ಪರ್ಯಾಯ ಸಾಧನ ವ್ಯವಸ್ಥಾ ಸ್ಥಲ:

### ೧ ಯೋಗಗಳವಿಚಾರ

ಅ) ಯೋಗದ ವಿಚಾರವು ಬಹು ಪುರಾತನ. ಅದರ ಅಂಗಗಳು ಮಂತ್ರ ಯೋಗ, ಲಯಯೋಗ, ಹಠಯೋಗ, ರಾಜಯೋಗ ಮತ್ತು ಶಿವಯೋಗ ಎಂದು ಐದು. ಇವುಗಳ ಸರ್ವಾಂಗ ಸುಂದರ ತಂತ್ರವೇ ಯೋಗ. ಇದು ಮುಖ್ಯವಾಗಿ ಎರಡು ಗುರಿಗಳುಳ್ಳದ್ದು. ಒಂದು ವಿಯೋಗ ಮತ್ತೊಂದು ಸಮರಸ. ಈ ಎರಡು ಆಧ್ಯಾತ್ಮದ ಗುರಿಗಳು.

ಆದರೆ ಯೋಗಸಾಧನೆಯಲ್ಲಿ ತೊಡಗಿದ ಸಾಧಕರಲ್ಲಿ ಕೆಲವರು ಯೋಗದ ದೈಹಿಕಾದಿ ಹಲವಾರು ಸಿದ್ಧಿಗಳಿಗೆ ಮನಸೋತವರು ಆಯಾ ಸಿದ್ಧಿಗಳ ಸಂಪಾದನೆಯಲ್ಲಿಯೆ ಮಗ್ನರಾಗಿ ಮೂಲ ಉದ್ದೇಶವನ್ನೆ ಮರೆತು ಬಿಟ್ಟರು.

ಕಾಯಾನುಭಾವಿಗಳು ಕಾಯದಲೆ ಮುಕ್ತರು,
ಜೀವಾನುಭಾವಿಗಳು ಜೀವದಲೆ ಮುಕ್ತರು,
ಪ್ರಾಣಾನುಭಾವಿಗಳು ಪ್ರಾಣದಲೆ ಮುಕ್ತರು,
ಪವನಾನುಭಾವಿಗಳು ಪವನದಲೆ ಮುಕ್ತರು,
ಲಿಂಗಾನುಭಾವಿಗಳಿಗೆಂತು ಸರಿಯೆಂಬೆ ?
ನಿರವಯ ಸ್ವಯಂಜ್ಯೋತಿ ಪ್ರಕಾಶವಾಗಿಪ್ಪರು ಲಿಂಗದಲ್ಲಿ,
ಕೂಡಲಚನ್ನಸಂಗಾ, ನಿಮ್ಮ ಶರಣರು. ೧೦೯

ಎಂಬ ಈ ವಚನವು ಅಂಥ ಸಿದ್ಧಿಗಳ ಪಟ್ಟಿಯನ್ನು ಕೊಟ್ಟು ಪರಬ್ರಹ್ಮಸ್ವರೂಪ ಪಡೆದುಕೊಳ್ಳುವದನ್ನು ಮರೆತವರನ್ನು ಬ್ರಹ್ಮರೂಪಿ ಆದವರಿಗೆ ಹೋಲಿಸಲಿಕ್ಕಾಗದು ಉಳಿದ ಸಿದ್ಧಿಪಡೆದವರನ್ನು ಎಂದು ಚನ್ನಬಸವಣ್ಣನವರು ತಿಳಿಸಿದರು.

---
೧೦೯

ಮತ್ತು ಲಿಂಗಾಂಗ ಸಮರಸಯೋಗವನ್ನು ಸಾಧನೆ ಮಾಡಲು ಬೋಧಿಸಿದರು. ಅಲ್ಲಮ ಪ್ರಭುದೇವರು ಕೂಡ ತಮ್ಮ ಒಂದು ವಚನದಲ್ಲಿ ಸಿದ್ಧಿಯ ಯೋಗಗಳನ್ನು ಖಂಡಿಸಿದ್ದಾರೆ—

ನಾರು ಬೇರಿನ ಕುಟಿಲ ಕುಹಕದ ಕಪಟದ ಯೋಗವಲ್ಲದು ನಿಲ್ಲಿರೋ !
ಕಾಯಸಮಾಧಿ, ಕರಣ ಸಮಾಧಿ. ಜೀವಸಮಾಧಿ ಯೋಗವಲ್ಲದು ನಿಲ್ಲಿರೋ!
ನಿಜ ಸಹಜಸಮಾಧಿ ಗೊಹೇಶ್ವರಾ, ೧೧೦

ಇವೆಲ್ಲ ಸಿದ್ಧಿಗಳು ಭಿನ್ನವಾದುದನ್ನೇ ಅಂದರೆ ಭಗ್ನವಾದುದನ್ನೆ ಸೂಚಿಸುವದನ್ನು ಪ್ರಭುದೇವರು ತೋರಿಸಿ, ಇವುಗಳಿಗೆ ಪರ್ಯಾಯವಾಗಿ ಲಿಂಗಾಂಗ ಸಾಮರಸ್ಯವನ್ನು ಅಥವ ಶಿವ ಜೀವ ಸಾಮರಸ್ಯವನ್ನು ಮುಟ್ಟುವ ಯೋಗವನ್ನು ಚೆನ್ನಬಸವಣ್ಣನವರಂತೆ ಪ್ರತಿಪಾದಿಸಿ, ಅಂದಿನ ಸಮಾಜದಲ್ಲಿ ಜನಪ್ರಿಯವಾದ ಸಿದ್ಧಿಯೋಗಗಳನ್ನು ಖಂಡಿಸಿದ್ದಾರೆ.

ಬ) ಯೋಗವೆಂದರೆ ಸಾಂಖ್ಯಯೋಗದಲ್ಲಿ ವಿಯೋಗ, ಯೋಗವೆಂದರೆ ಶಿವ (ಲಿಂಗ) ಶಕ್ತಿ (ಅಂಗ) ಅಥವ ಜೀವರು ಬೇರೆಬೇರೆ ಅಲ್ಲವೆಂಬುದರ ಸಿದ್ಧಿ. ಇದು ಸಮರಸಯೋಗ. ಈ ಯೋಗವನ್ನು ಶಿವಶರಣರು ಬೋಧಿಸಿದರು. ಅವರು ಕಾಯ ಜೀವ ಕರಣ ಪ್ರಾಣ ಮೊದಲಾದವುಗಳ ಯೋಗಸಿದ್ಧಿಯನ್ನು ಕಟುವಾಗಿ ಟೀಕಿಸಿ ಅಂಥವರ ಸಾಧನೆ ಅಜ್ಞಾನ ಸಂಪಾದನೆ ಅಸ್ವಾತಂತ್ರ್ಯ (ಪರತಂತ್ರ) ವೆಂಬುದನ್ನು ಮನದಟ್ಟು ಮಾಡಿಕೊಟ್ಟು ಅವರನ್ನು ಆ ಕೀಳು ಗುರಿಗಳಿಂದ ವಿಮುಖಗೊಳಿಸಿ, ಉನ್ನತ ಗುರಿಯಾದ ಆತ್ಮ, ಬ್ರಹ್ಮ ಸಮರಸ ಸಿದ್ಧಿಯಲ್ಲಿ ತೊಡಗಲು ಆಕರ್ಷಿಸಿದರು. ಈ ಕಾರ್ಯವನ್ನು ಅವರು ಶಿವಯೋಗ ಬೋಧೆಯಿಂದ ಸಾಧಿಸಿದರು.

ಯೋಗ ಶಿವಯೋಗವೆಂದೆಂಬರು. ಯೋಗದ ಹೊಲಬನಾರು ಬಲ್ಲರಯ್ಯಾ?
ಹೃದಯಕಮಲದ ಪತ್ರದಲ್ಲಿ ಭ್ರಮಿಸುವನ ಕಳೆದಲ್ಲದೆ ಯೋಗವೆಂತಪ್ಪುದೋ?
ಐವತ್ತೆರಡಕ್ಷರದ ಲಿಪಿಯ ನೋಡಿ ನೋಡಿ,
ಆರು ನೆಲೆಯ ಮೇಲಿಪ್ಪ ಮಣಿಮಾಡದೊಳಗೆ ಇರಬಲ್ಲಡೆ, ಅದುಯೋಗ.
ಸೋಹಂ ಎಂಬಲ್ಲಿ ಸುಳುಹಡಗಿ,
ಮನ ನಷ್ಟವಾಗಿರಬಲ್ಲ ಕಾರಣ ಗುಹೇಶ್ವರಲಿಂಗದಲ್ಲಿ
ನೀನು ಸ್ವತಂತ್ರ ಧೀರನೆಂಬುದು ಕಾಣಬಂದಿತ್ತು ಕಾಣಾ ಸಿದ್ಧರಾಮಯ್ಯ. ೧೧೧

---

೧೧೦ ಪಿ. ಜಿ. ಹಳಕಟ್ಟಿ (ಸಂ) ಶೂನ್ಯಸಂಪಾದನೆ. ಸಂ. ೨೧ ವ ೫

೧೧೧ ಪಿ. ಜಿ. ಹಳಕಟ್ಟಿ (ಸಂ). ಶೂನ್ಯಸಂಪಾದನೆ ೩ನೆಯ ಸಂಪಾದನೆ ೪೬೮ ವಿಜಾಪುರ (೧೯೩೦)

ಯೋಗದ ವ್ಯಾಖ್ಯೆಯನ್ನು ಪ್ರಭುದೇವರು ಮಾಡುತ್ತ ಮನವು ಆರುಚಕ್ರಗಳಲ್ಲಿರುವ ೫೨ ಲಿಪಿಗಳನ್ನು ನೋಡಿ ನೋಡಿ ಅವುಗಳಲ್ಲಿ ಓಡಾಡುವದು. ಈ ಹರಿದಾಟವನ್ನು ನಿಲ್ಲಿಸಿ ಈ ಆರುಚಕ್ರಗಳಾಚೆ ಇರುವ ಸಹಸ್ರಾರದಲ್ಲಿಯ ಪರಶಿವನಲ್ಲಿ ಇರುವ ಏಕತ್ವ ಸಿದ್ಧಿಯೇ ಯೋಗವೆಂದು ಹೇಳುತ್ತಾರೆ. ಈ ಏಕತ್ವದಲ್ಲಿ 'ಸೋಹಂ' ಎಂಬುದು ನಿಲ್ಲುವದು. ಯಾಕೆಂದರೆ ಈ ಆರೂಢಿಯ ಕೂಟದಲ್ಲಿ[೧೧೨] ಸಾಕ್ಷಿಗೆ ಸ್ಥಾನವಿಲ್ಲ. ಹೀಗಾಗುವದೇ ಮನ ಘನವಾಗಿರುವ ರೀತಿ, ಇದೇ ಯೋಗ, ಇದೇ ಸ್ವಾತಂತ್ರ್ಯ ಸಂಪಾದನೆ' ಉಪನಿಷತ್ತುಗಳು ಹೇಳುವ 'ಸ್ವಾರಾಜ್ಯ' ಸಂಪಾದನೆ. ಈ 'ಸ್ವತಂತ್ರ' ವನ್ನು ಪ್ರಭುದೇವರೇ ವ್ಯಾಖ್ಯಾನಿಸಿದ್ದಿಂತು:

ಸ್ವತಂತ್ರ ಪರತಂತ್ರಕ್ಕೆ ಆವುದು ಚಿಹ್ನ ನೋಡಾ.
ತಾನೆಂಬುದಳಿದು, ಇದಿರೆಂಬುದ ಮರೆದು,
ಭಾವದಗ್ಧವಾಗಿರಬಲ್ಲಡೆ, ಅದು ಸ್ವತಂತ್ರ.
ನೀನೆಂಬುದ ಧಿಃಕರಿಸಿ ತಾನೆಂಬುದ ನೀಃಕರಿಸಿ,
ಉಭಯ ಭಾವದಲ್ಲಿ ಸನ್ನಿಹಿತವಾಗಿರಬಲ್ಲಡೆ, ಪರತಂತ್ರ.
ಸ್ವತಂತ್ರ ಪರತಂತ್ರವೆಂಬೆರಡನೂ ವಿವರಿಸದೆ
ತನ್ನ ಮರೆದಿಪ್ಪನೆ ಉಪಮಾತೀತನು.
ಗುಹೇಶ್ವರನ ಶರಣನು ದೇಹವಿಲ್ಲದ ನಿರ್ದೇಹಿಗಳೆಂಬುದು
ಇಂದೆನಗೆ ಕಾಣಬಂದಿತ್ತು ನೋಡಾ ಸಿದ್ಧರಾಮಯ್ಯ.[೧೧೩]

ಪರತಂತ್ರದಿಂದ ಮುಕ್ತನಾಗುವ, ಸ್ವಂತತ್ರಸಿದ್ಧಿ ಪಡೆಯುವ, ಇವೆರಡಕ್ಕೂ ಉಪರಿಯಾದ ನಿಶ್ಶಬ್ದ ಬ್ರಹ್ಮವಾಗುವ ರೀತಿಯ ತಂತ್ರವನ್ನಿಲ್ಲ ತಿಳಿಸಿದ್ದಾರೆ. ಈ ಶಿವಯೋಗವು ಸರ್ವಶ್ರೇಷ್ಠ ಉಳಿದೆಲ್ಲ ಯೋಗಗಳಿಗಿಂತ ಎಂದು ಪ್ರತಿಪಾದಿಸಿದರು.
ಇದನ್ನೆ ಘಟ್ಟಿವಾಳಯ್ಯಗಳು ತಿಳಿಸಿದ್ದು ಒಂದು ಭಾಷ್ಯದಂತಿದೆ ನೋಡಿ—

ಯೋಗದ ಹೊಲಬು ಸಾಧಿಸಬಾರದು.
ಯೋಗವೆಂಟರ ಹೊಲಬಲ್ಲ.
ಯೋಗ ಒಂಬತ್ತರ ನಿಲವಲ್ಲ.
ಯೋಗವಾರರ ಪರಿಯಲ್ಲ.
ಧರೆಯ ಮೇಲಿನ ಅಗ್ನಿ ಮುಗಿಲ ಮುಟ್ಟದೆ
ಇಪ್ಪರೆ ಯೋಗ.

---

೧೧೨ ಪಿ. ಜಿ. ಹಳಕಟ್ಟಿ (ಸಂ) ಶೂನ್ಯಸಂಪಾದನೆ ೨ನೆಯ ಸಂಪಾದನೆ ಪ ೨೧

೧೧೩ ಪಿ. ಜಿ. ಹಳಕಟ್ಟಿ (ಸಂ). ಶೂನ್ಯಸಂಪಾದನೆ ೨ನೆಯ ಸಂಪಾದನೆ, ಪ. ೬೯

ಜ್ಞಾನದ ಕಂಗಳ ಬೆಳಗು ಶಶಿಯ ಮುಟ್ಟದಮೇದರೆ,
ಘನ ಮನವನೊಳಕೊಂಡುದು ಯೋಗ.
ಘನ ಮಹಿಮ ಪ್ರಭುವಿನ ಸಮರಸಕಂಡು,
ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ ಎನುತಿರ್ದೆನು.[೧೧೪]

ಯೋಗವು ಅಷ್ಟಾಂಗ ಗುರಿಯ ಸಾಧನವಲ್ಲ. ಯೋಗವು ನವಚಕ್ರದಲ್ಲಿ ಅಥವ ಷಟ್‌ಚಕ್ರದಲ್ಲಿ ನಿಲ್ಲುವ ಗುರಿಯ ಸಾಧನವಲ್ಲ. ಆಧಾರ ಚಕ್ರದಲ್ಲಿಯ ಶಕ್ತಿ ಆಕಾಶ ತತ್ತ್ವ ಚಕ್ರದಲ್ಲಿ ನಿಲ್ಲುವದೂ ಯೋಗದ ಗುರಿಯಲ್ಲ. ಸೂರ್ಯನೊಳಗಿಪ್ಪನಾ ಅಗ್ನಿ, ಆ ಅಗ್ನಿ ಮಧ್ಯದಲ್ಲಿ ಚಂದ್ರ ನಿಪ್ಪ ಎಂಬ ಶಿವಯೋಗದರ್ಪಣದ ಹೇಳಿಕೆಯಂತೆ- ಸೂರ್ಯನ ಜ್ಞಾನದ ಅಗ್ನಿಯನ್ನು ದಾಟಿ, ಆ ಅಗ್ನಿಮಧ್ಯದಲ್ಲಿರುವ ಅಮೃತ ಕಿರಣ ನಾಗಿರುವ ಆತ್ಮನಲ್ಲಿ ಉಳಿದರೆ ಆಘನವೇ ಮನವನು ತನ್ನಲ್ಲಿ ಅಡಗಿಸಿಕೊಳ್ಳು ವದು, ಅದು ಯೋಗ. ಹೀಗೆ ಯೋಗದ, ಅಂದರೆ ಶಿವಯೋಗದ, ಹೊಲಬನ್ನು ಘಟ್ಟಿವಾಳಯ್ಯಗಳು ಹೇಳಿದ್ದಾರೆ. .

೨ ಅನುಭವ

ಇದು ಒಲಿಸುವ, ಆಗುವ, ಮತ್ತು ಬದುಕುವ ರೀತಿಯಾಗಿದೆ. ಇದರ ವಿಧಾನವನ್ನು ಬಸವಣ್ಣನವರು ಒಂದೆಡೆ ಹೇಳಿದ್ದಾರೆ.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ,
ತನ್ನ ಬಣ್ಣಿಸಬೇಡ, ಇದಿರು ಹಳಿಯಲುಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ.[೧೧೫]

ಅನುಭವ ಪಥವೆಂದರೆ ದೇವರನ್ನೊಲಿಸಿಕೊಳ್ಳುವ ಮಾರ್ಗ. ಈ ಮಾರ್ಗದಲ್ಲಿ ಅಂತರಂಗ ಮತ್ತು ಬಹಿರಂಗ ಎಂಬ ಶುದ್ಧಿಯ ಅವಶ್ಯಕತೆಯಿದೆ. ಇದು ಅಂದರೆ ಶುದ್ಧಿಯು ಸತ್ವ ಶುದ್ಧಿಯಿಂದ ಸಾಧ್ಯ. ಸತ್ವಶುದ್ಧಿಯ ಸಾಧನೆಯಲ್ಲಿ ಪಾಲಿಸಬೇಕಾದ ವಿಧಿಗಳು ಇರುತ್ತವೆ. ಅವುಗಳನ್ನು ಇಲ್ಲಿ ಬಸವಣ್ಣನವರು ತಿಳಿಸಿದ್ದಾರೆ. ಇದರಲ್ಲಿ ಅಹಿಂಸೆ ಪರಿಪಾಲನೆಯ ವಿಚಾರವನ್ನು ತಿಳಿಸಿದ್ದಾರೆ. ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು ಅಹಿಂಸೆಯನ್ನು ಪರಿಪಾಲಿಸಬೇಕೆಂದುದು ಅಥವಾ ಕಾಯಾ ವಾಚಾಮನಸಾ ಅಹಿಂಸಾ ಪಾಲನೆಯಾಗಬೇಕೆಂಬುದು ಅಂತರಂಗ ಬಹಿರಂಗ ಶುದ್ಧಿಯು

---

೧೧೪ ಪಿ. ಜಿ. ಹಳಕಟ್ಟಿ (ಸಂ). ಅದೇ. ಸಂಪಾದನೆ ೧೫. ವ. ೫ .
೧೧೫ ಎಸ್. ಎಸ್ ಬಸವನಾಳ (ಸಂ). ಬಸವಣ್ಣನವರ ವಚನಗಳು. ವ. ೨-೫

ವಿಚಾರದ ಅವಶ್ಯಕತೆ. ಇವುಗಳನ್ನು ಪರಿಪಾಲಿಸಲಾಗಿ ದೇವರು ಒಲಿಯುವನು ಎಂಬುದರ ಆಶ್ವಾಸನೆಯನ್ನು ಕೊಟ್ಟಿದ್ದಾರೆ. ಇದೇ ದೇವರನ್ನು ಒಲಿಸುವ ವಿಧಾನ. ಇದು ಸರ್ವರಿಗೂ ಸಾಧ್ಯವಾಗುವ ಮಾರ್ಗ. ಇದಕ್ಕೆ ಪಾಂಡಿತ್ಯ, ವರ್ಣಉತ್ಕೃಷ್ಟತೆ ಬೇಕಿಲ್ಲ.

ಕೂಡಲ ಸಂಗಮದೇವನೊಲಿಸುವದೆಂಬುದೇ ಆತನ ಕೃಪೆಗೆ ಪಾತ್ರವಾಗುವದು. ಹೀಗೆ ಆತನ ಕೃಪಾ ಸಿದ್ಧಿಯಾಯಿತೆಂದರೆ ತೀರಿತು. ಆಗ ಆ ಕೃಪೆಯು ಈತನನ್ನೆಲ್ಲ ಆವರಿಸಿ ಬಿಡುವುದು ಸರ್ಪ ಕಚ್ಚಿದರೆ ವಿಷ ಶರೀರವನ್ನೆಲ್ಲ ಆವರಿಸುವಂತೆ, ಅಥವಾ ಕಿಚ್ಚಿನಲ್ಲಿ ಸೇರಿದ ಕೋಲು ಕಿಚ್ಚಾಗುವಂತೆ. ಇದು ಅನುಭಾವದಲ್ಲಿಯ ಎರಡನೆಯ ಸಿದ್ಧಿ. ಇದೇ ಅನುಭವ ಆಗುವದು ಎಂಬುದರ ಮರ್ಮ.

ಈ ರೀತಿ ಪರಶಿವನ ಕೃಪೆಯಾಗಿ ಪರಿವರ್ತನೆಯಾಗುವುದೆಂದರೇನೆ ಪರಶಿವ ಲಿಂಗವಾಗಿ ಬಿಡುವುದು. ಇದನ್ನೆ ಶರಣರ ಪರಿಭಾಷೆಯಲ್ಲಿ ಅಂಗ ಹೋಗಿ ಲಿಂಗವಾಗುವುದು ಎಂದು ಹೆಸರಿಸಿದ್ದು. ಇದಾದ ಮೇಲೆ ಬದುಕುವುದು. ಲಿಂಗವಾಗಿ ಬದುಕುವುದೇ ದೇವ ಬದುಕು ಅಥವಾ ಪರಮಾತ್ಮನಾಗಿ ಇರುವುದು. ಈ ಇರವ ಇರುವುದೆ ಜಗತ್ತನ್ನು ಪಾವನ ಮಾಡುವುದು. ಇವರು ಜೀವನ್ಮುಕ್ತರು. ಇದು ಅನುಭವದ ಪರಾಕಾಷ್ಠೆ; ಪ್ರತಿ ಫಲ. ಇದರಿಂದ ಮೇಲೆ ಅನುಭವ ಇರುವದಿಲ್ಲ; ಇದರಿಂದ ಮೇಲೆ ಶಬ್ದವೂ ಇಲ್ಲ.

**ಆಗಮ ಭಕ್ತಿ ವ್ಯವಸ್ಥೆಗೆ ಪರ್ಯಾಯ ಭಕ್ತಿ ವ್ಯವಸ್ಥೆ :**

ಭಕ್ತಿಯನ್ನು ಕುರಿತು ಶಿವಶರಣರು ಹೇಳಿದ್ದು ಸರ್ವಾದರಣೀಯವಾಗಿದೆ. ಭಕ್ತಿಯು ಒಂದು ಶಾಸ್ತ್ರವಾಗಿ ರೂಪುಗೊಂಡಿದೆ. ಈ ಸಾಹಿತ್ಯ ಹೇರಳವಾಗಿ ಬೆಳೆದಿದೆ. ಉಳಿದ ದರ್ಶನಗಳಲ್ಲಿ ಸೂತ್ರಗಳಿರುವಂತೆ ಭಕ್ತಿ ಸಾಹಿತ್ಯದ ಅಪಾರ ವಿಪುಲತೆಯನ್ನು ಹಿಂಡಿ ಹಿಂಡಿ ಸಾರತಮಗೊಳಿಸಿ ಸ್ವಲ್ಪದರಲ್ಲಿ ಹೇಳಲೋಸುಗ ಭಕ್ತಿಯ ಸೂತ್ರಗಳೂ ಆಗಿರುತ್ತವೆ. ಶಾಸ್ತ್ರೀಯವಾಗಿ ಪರಿಪಾಲಿಸುವ ಮನೋ ಧರ್ಮವೇ ಒಂದು. ಇದನ್ನು ಸಶಾಸ್ತ್ರೀಯವಾಗಿ ನಡಿಸಿಕೊಂಡು ಹೋಗುವ ಸಾಮರ್ಥ್ಯವಿದ್ದವರ ಸಂಖ್ಯೆ ಅತ್ಯಲ್ಪ. ಇವರನ್ನು ಅಲ್ಪ ಸಂಖ್ಯಾತರು ಎಂದು ಹೆಸರಿಸಬಹುದು. ಆದರೆ ಅರೆ ಶಾಸ್ತ್ರೀಯವಾಗಿ, ಅಶಾಸ್ತ್ರೀಯವಾಗಿ ಆಚರಿಸುವವರ ಸಂಖೆ ಅತಿ ದೊಡ್ಡದು. ಈ ಬಹು ದೊಡ್ಡ ಸಂಖೆಯಲ್ಲಿ ಅಶಾಸ್ತ್ರೀಯ ಭಕ್ತಿಯನ್ನಾಚರಿಸುವವರ ಸಂಖೆ ಅತಿ ದೊಡ್ಡದು. ಈ ಮೂರು ಬಗೆಯ ಜನರಿಗೂ ಭಕ್ತಿಯು ಅತ್ಯಂತ ಪ್ರಿಯ. ಇವರ ಮನೋಧರ್ಮವೆಂದರೆ—

ಅಯ್ಯಾ ನೀನು ಕೇಳಿದಡೆ ಕೇಳು, ಕೇಳದಡೆ ಮಾಣು;
ಆನು ನಿನ್ನ ಹಾಡಿದಲ್ಲದೆ ಸೈರಿಸೆನಯ್ಯಾ.

ಅಯ್ಯಾ ನೀನು ನೋಡಿದಡೆ ನೋಡು, ನೋಡದಡೆ ಮಾಣು;
ಆನು ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯಾ.
ಅಯ್ಯಾ ನೀನು ಮೆಚ್ಚಿದಡೆ ಮೆಚ್ಚು, ಮೆಚ್ಚದಡೆ ಮಾಣು;
ಆನು ನಿನ್ನನಪ್ಪಿದಲ್ಲದೆ ಸೈರಿಸಲಾರೆನಯ್ಯಾ.
ಅಯ್ಯಾ ನೀನು ಒಲಿದಡೆ ಒಲಿ ಒಲಿಯದಡೆ ಮಾಣು;
ಆನು ನಿಮ್ಮ ಪೂಜಿಸದಲ್ಲದೆ ಸೈರಿಸಲಾರೆನಯ್ಯಾ.
ಚೆನ್ನಮಲ್ಲಿಕಾರ್ಜುನಯ್ಯಾ, ಆನು ನಿಮ್ಮನರ್ಚಿಸಿ, ಪೂಜಿಸಿ
ಹರುಷದೊಳೋಲಾಡುವೆನಯ್ಯಾ. ೧೧೩

ದೇವರಿದ್ದಾನೆ ಎಂದು ಅನಾದಿಕಾಲದ ನಂಬುಗೆಯೆ ಇವರ ನಂಬುಗೆ. ಇವರಿಗೆ ಶಾಸ್ತ್ರ, ಸಿದ್ಧಾಂತಗಳಿಗಿಂತ ನಡೆದು ಬಂದ ದಾರಿ ಮುಖ್ಯ. ನಡೆದವರು ಕಣ್ಣಪ್ಪನಿರ ಬಹುದು. ಇವರು ಭಕ್ತಿಯಿಂದ ದೇವರ ಪೂಜೆಗೆ ಹೋದವರಾದರೆ ಸಾಕು. ಇವರ ಆಚರಣೆ ಸಾಕ್ಷರ ಮತ್ತು ನಿರಕ್ಷರಕುಕ್ಷಿಗಳಿಗೆ ದಾರಿದೀಪ. ಸಶಾಸ್ತ್ರೀಯವಾಗಿ ಪೂಜಿ ಸುವ ಶಾಸ್ತ್ರೀಯ ಪೂಜೆ ಇರಲಿ, ಕಣ್ಣಪ್ಪನಂತೆ ನಡಿಸಿದ ಪೂಜೆ ಇರಲಿ; ಇವರಿಗೆ ದೇವರ ದರ್ಶನ, ನಮಸ್ಕಾರ, ಆತನ ಪ್ರಸಾದ ಮುಖ್ಯ. ತಾವು ಹೋಗಿ ದೇವರ ಪಡೆಯಲಸಾಧ್ಯವಾದರೆ ತಮ್ಮ ಭಕ್ತಿಯ ಸೇವೆಯನ್ನು ಸಲ್ಲಿಸಲು ಯಾರೇ ಸಿಕ್ಕರು ಆಯಿತು. ಸಿಗದಿದ್ದರೆ ಇದ್ದಲ್ಲಿಂದಲೇ ಕೈ ಮುಗಿಯುವರು. ಅದೇ ರೀತಿ ಇಷ್ಟ ಲಿಂಗ ಭಕ್ತರು ಕೂಡ ಸಶಾಸ್ತ್ರೀಯ ಪೂಜೆ ಮಾಡಿಕೊಳ್ಳಲು ಬರದವರಿದ್ದಿರ ಬಹುದು. ಅವರು ತಮ್ಮ ಇಷ್ಟಲಿಂಗಕ್ಕೆ ನೀರುತೋರಿಸಿ ಕೈ ಮುಗಿದು ನೈವೇದ್ಯ ಹಿಡಿದು ಪ್ರಸಾದ ತೆಗೆದು ಕೊಳ್ಳುವುದೇ ಅವರ ತೀವ್ರಭಕ್ತಿಯ ಬಯಕೆ. ಇದು ಅಶ್ರೌತ ಭಕ್ತಿ. ಇದು ಸರ್ವಶ್ರೇಷ್ಠ ಭಕ್ತಿಯಾಚಾರ, ಬಹು ಜನರಿಗೆ ಸುಲಭದ ರಾಜಮಾರ್ಗ ಈ ಅಶ್ರೌತ ಭಕ್ತಿ. ಈ ಭಕ್ತಿಯ ಹುಚ್ಚುಹೊಳೆಯನ್ನು ಶೈವದ ವಿವಿಧ ಪಂಗಡಗಳಲ್ಲಿ ನೋಡುತ್ತೇವೆ. ಆದರೆ ವೈಷ್ಣವದ ವೀರವೈಷ್ಣವ, ಮಾಧ್ವ ವೈಷ್ಣವ ಮೊದಲಾದವರಲ್ಲಿ ಶಾಸ್ತ್ರೀಯವಲ್ಲದ ಭಕ್ತಿ ಇದೆಯೇ ಎಂಬುದು ಗೊತ್ತಿಲ್ಲ. ವೈಷ್ಣವರ ಭಕ್ತಿಯ ಚರಿತ್ರೆಯಲ್ಲಿ ವೈಷ್ಣವೇ ತರರಾದ ಶೂದ್ರವರ್ಣದವ ರಲ್ಲಿ ಅಶ್ರೌತ ಭಕ್ತಿಯನ್ನು ನೋಡುತ್ತೇವೆ. ಇಂಥವರು ವೈಷ್ಣವರೇ ಆಗಿರದೆ, ವೈಷ್ಣವರ ದೇವರ ಭಕ್ತರಾಗಿರುತ್ತಾರೆ.

ಬಸವಣ್ಣನವರು ಈ ಅಶ್ರೌತ ಭಕ್ತಿಯ ಪ್ರಮುಖಲಕ್ಷಣವನ್ನು ಗುರುತಿಸಿದ್ದು ಇಂತಿದೆ.

---

೧೧೩. ಡಾ. ಆರ್. ಸಿ. ಹಿರೇಮಠ (ಸಂ), ಶಿವಶರಣೆಯರ ವಚನಗಳು, ಭಾಗ ೧
ಪು. ೪೨. ವ ೧೦೮ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ (1968)

ಅವಲಕ್ಷಣ ನಾಯನುಡಿಯ ಸಡಗರ,
ಡೊವಗೆ ಮೃತ್ಯುವಿನ ಸುಡಿಗೊಳಗಾಯಿತ್ತು !
ಬೇಡವೋ, ಪರವಾದೀ, ಗಳಹದಿರು;
ಬೇಡವೋ, ದೂಷಕಾ ಬಗುಳದಿರು !
ಭಕ್ತಿಗೆಯೂ ಬೇಟಕ್ಕೆಯೂ ಜಾತಿಸೂತಕವುಂಟೆ ?
ಪರುಷ ಮುಟ್ಟಲು ಕಬ್ಬುಣ ಹೊನ್ನಾಯಿತ್ತು, ಕಣಾ.
ನಮ್ಮ ಕೂಡಲ ಸಂಗನ ಶರಣರನ್ನರಿವರೆಂದರೆ
ಕುಂಭಿಪಾತ ನಾಯಕನರಕ ತಪ್ಪದು ಕಾಣಾ.೧೯೭

ಪರವಾದಿಯೊ ( ಪ್ರತಿವಾದಿ ಅಥವ ಪೂರ್ವಪಕ್ಷದವರೊ ) ಡನೆ ಶ್ರೌತಾಶ್ರೌತ ಭಕ್ತಿಯ ವಿಷಯದಲ್ಲಿ ನಡೆದಂಥ ಸಂಪಾದನೆಯನ್ನು ಈ ವಚನವು ತಿಳಿಸುತ್ತದೆ. ಪರವಾದಿಯು ಶ್ರೌತಧರ್ಮ ಅಥವಾ ಶ್ರೌತ ಭಕ್ತಿ ಪ್ರತಿಪಾದನೆಯಲ್ಲಿ ತೊಡಗಿರುವದೇ ಈ ಸಂಪಾದನೆಯ (ಚರ್ಚೆಯ) ವಿಷಯವಾಗಿದೆ. ಅದನ್ನು ಬಸವಣ್ಣನವರು ತುಂಬಾ ಯಶಸ್ವಿಯಾಗಿ ನಡಿಸಿಕೊಂಡು ಹೋಗಿದ್ದಾರೆ. ಶಾಸ್ತ್ರವೇತ್ತರಾದವರು ಭಕ್ತಿಯ ವಿಷಯದಲ್ಲಿ ಕೂಡ ಜಾತಿಯ ಮಾತನ್ನು ಎತ್ತಿದ್ದನ್ನು ಬಸವಣ್ಣವರು ಖಂಡಿಸಿದ್ದಾರೆ.

ಮಹಾದೇವಿಯಕ್ಕ ತಾನು ಮೆಚ್ಚಿದ ದೇವರು ತನ್ನನ್ನು ನೋಡಲಿ ನೋಡದಿರಲಿ ತನ್ನ ಹಾಡನ್ನು ಕೇಳದಿರಲಿ ಅವನು ಮೆಚ್ಚಲಿ ಅಥವ ಮೆಚ್ಚದೆ ಬಿಡಲಿ ತಾನು ಮಾತ್ರ ಭಕ್ತಿಪರವಶತೆಯಿಂದ ದೇವನನ್ನು ನೋಡುವವಳೆ, ಹಾಡುವವಳೆ, ಆತನನ್ನು ಮನದಲ್ಲಿ ಆಲಂಗಿಸಿ ರೋಮಾಂಚನಗೊಂಡು ಮೈ ಮರೆಯುವವಳೆ. ಈ ನಿರ್ಧಾರವು ಏಕಪಕ್ಷೀಯಿವಾಗಿರುವದನ್ನು ತೋರಿಸಿ ಭಕ್ತಿಯನ್ನಾಚರಿಸುವ ಸ್ವಾತಂತ್ರ್ಯವನ್ನು ಘೋಷಿಸಿದರೆ, ಬಸವಣ್ಣನವರು ಏನೂ ಗೊತ್ತಿಲ್ಲದ ಸಮಾಜದ ವ್ಯಕ್ತಿಯು ತನ್ನ ಮನಸ್ಸಿಗೆಬಂದಹಾಗೆ ಪೂಜಿಸಬಹುದು. ಯಾವುದೇ ಸಮಯದಲ್ಲಿ ಪೂಜಿಸಬಹುದು. ತನಗೆ ಲಭ್ಯವಿರುವ ಪೂಜಾವಸ್ತುಗಳು ಎಂಥವಿದ್ದರೂ ಪೂಜಿಸಬಹುದು. ಪೂಜೆಗೆ ಸಲ್ಲುವದಿಲ್ಲ 'ಕೇದಗೆ ಹೂ' ಎಂಬ ಶಾಸ್ತ್ರದ ಮಾತು ಕಾಡಿನಲ್ಲಿರುವ ಭಕ್ತಗೆ ಗೊತ್ತಿಲ್ಲ; ಒಂದು ವೇಳೆ ಕೇಳಿ ತಿಳಿದಿದ್ದರೂ ಆತನು ಕೇದಗೆಯನ್ನು ದೇವರಿಗೆ ಏರಿಸಿ ಪೂಜಿಸಿದರೆ ಅದನ್ನು ಆತ ಅತ್ಯಂತ ಪ್ರೀತಿಯಿಂದ ಸ್ವೀಕರಿಸುವನು ಎಂಬುದನ್ನು ಬಸವಣ್ಣನವರೇ ತೋರಿಸಿದ್ದಾರೆ. ಹೀಗೆ ಬಲಹೀನ ಅಂದರೆ ಅವಿದ್ಯಾವಂತ, ಸಾಮಾಜಿಕ ಸ್ಥಾನಮಾನಗಳಿಲ್ಲದ ಸಮಾಜವನ್ನು ಶಾಸ್ತ್ರದ ಹೆಸರಿನಲ್ಲಿ ಶೋಷಣೆಗೆ ಒಳಗಾದವರ ಭಕ್ತಗೆ ಹೊಸ

---

೧೯೭ ಎಸ್. ಎಸ್. ಬಸವನಾಳ [ಸಂ] ಅದೇ ವ, ೫೬೯ ಎಲ್, ಇ. ಅಸೋಸಿಯೇಶನ್ ಧಾರವಾಡ [೧೯೬೨]

ಮಾರ್ಗವನ್ನೇ ತೋರಿಸಿದರು. ಹೀಗೆ ಮಹಾದೇವಿಯಕ್ಕ ಮತ್ತು ಬಸವಣ್ಣನವರು ಶಾಸ್ತ್ರೋಕ್ತಭಕ್ತಿವ್ಯವಸ್ಥೆಗೆ ಪರ್ಯಾಯ ಭಕ್ತಿವ್ಯವಸ್ಥೆಯನ್ನು ಪ್ರತಿಪಾದಿಸಿದರು.

## ಆಗಮ ಕರ್ಮವ್ಯವಸ್ಥೆಗೆ ಪರ್ಯಾಯ ಕರ್ಮವ್ಯವಸ್ಥೆ:

ಆಗಮ ಕರ್ಮವ್ಯವಸ್ಥೆಯು ವರ್ಣಕರ್ಮವ್ಯವಸ್ಥೆ. ಇದಕ್ಕೆ ವಿರೋಧವು ಪ್ರತಿ ಯುಗದಲ್ಲಿ ನಡೆಯುತ್ತಲೇ ಇತ್ತು. ಇದು ಸ್ಥಳಿಕ ಸ್ವರೂಪದ ವಿರೋಧವಾಗಿತ್ತು. ಅಂದರೆ ಇದು ಸಾರ್ವತ್ರಿಕ ಸ್ವರೂಪವನ್ನು ಅಖಿಲ ಭಾರತೀಯ ಪ್ರಚಾರವನ್ನು ಹೊಂದಿರಲಿಲ್ಲ. ನಿಗಮಗಳ ಅಧ್ಯಯನ, ಬೋಧೆ ಮತ್ತು ಭಾಷ್ಯಗಳನ್ನು ಬರೆಯುವ ಕಾರ್ಯವು ಶೂದ್ರಾದಿಗಳಿಂದ ನಡದೇ ಇತ್ತು. ಮಹಾಭಾರತದ ಕಾಲದಲ್ಲಿ ಏಕಲವ್ಯನು ಈ ವರ್ಣಕರ್ಮವ್ಯವಸ್ಥೆಯನ್ನು ಮೀರಿನಡೆದ ಧೀಮಂತ ವ್ಯಕ್ತಿಯಾದರೆ ಶೂದ್ರನೆಂದು ಪ್ರಸಿದ್ಧಿ ಪಡೆದ ಕರ್ಣನು ಅಂಥಕಾರ್ಯಮಾಡಿದ ಮತ್ತೊಬ್ಬ ವ್ಯಕ್ತಿ. ರಾಮಾಯಣದಲ್ಲಿ ಶೂದ್ರತಪಸ್ವಿಯೆಂದೇ ಹೆಸರೆತ್ತ ಶಂಬುಕನು ಬೇರೊಂದು ಉದಾಹರಣೆ. ಆಗಮಕ್ಕೆ ಭಾಷ್ಯವನ್ನು ಬರೆದ ಕೌಂಡಿನ್ಯ ಮುನಿಯು ನಾವಿದ(ಕನ್ನಡಿ ಕಾಯಕದವ). ಒಂಬತ್ತನೆಯ ಶತಮಾನದಲ್ಲಿಯ ಉತ್ತರ ಭಾರತದ ಕವಿಯೊಬ್ಬ ತನ್ನ ಸಂಸ್ಕೃತ ಕಾವ್ಯದಲ್ಲಿ ಶೂದ್ರರನ್ನು ಮುಟ್ಟಿಸಿಕೊಳ್ಳದಿರುವ ರೂಢಿಯ ವಿರುದ್ಧ ಧ್ವನಿಯನೆತ್ತಿದ ಆತನು ತನ್ನ ಕಾವ್ಯದಲ್ಲಿ ಶೂದ್ರರನ್ನು ಮುಟ್ಟಿಸಿಕೊಳ್ಳದಿದ್ದರೆ ತ್ರಿಪುರವನ್ನು ದಹನ ಮಾಡಿದಂತೆ ಶಿವನು ಅಂಥವರನ್ನು ತನ್ನ ಉರಿಗಣ್ಣಿನಿಂದ ದಹನ ಮಾಡುವನೆಂದದ್ದುಂಟು. ಆದರೆ ವಚನಾಗಮದ ಯುಗದಲ್ಲಿ ಈ ಹೋರಾಟವು ಒಂದು ಸಾರ್ವತ್ರಿಕ ಚಳುವಳಿಯ ಸ್ವರೂಪವನ್ನು ಪಡೆಯಿತು. ಹಿರಿಯಕುಲದ ಚನ್ನಯ್ಯ, ಡೋಹರ ಕಕ್ಕಯ್ಯ,ಮತ್ತು ಶ್ರಮಜೀವಿಗಳಾದ ಶೂದ್ರರಲ್ಲಿಯ ವಿವಿಧ ಕೆಲಸದವರೆಲ್ಲ ವಂದನೀಯರಾದ ಶರಣರಾದರು. ಹೀಗೆ ವರ್ಣವ್ಯವಸ್ಥೆಯಲ್ಲಿದ್ದ ಪೂಜ್ಯ ಪೂಜಕ, ಒಡೆಯ ಮತ್ತು ದಾಸಭಾವಗಳು ಈ ಅಶ್ರೌತಭಕ್ತಿಯ ಭವ್ಯ ಗಂಗಾಪ್ರವಾಹದಿಂದ ಕೊಚ್ಚಿಕೊಂಡು ಹೋದವು, ಬ್ರಾಹ್ಮಣರು ಬರೆದದ್ದೇ ಶಾಸ್ತ್ರವೆಂಬುದು ಮಾಯವಾಯಿತು. ಪರಾವಿದ್ಯಾ ಅಧಿಕಾರಸ್ಥಾನವು ಆನುವಂಶಿಕತೆಯನ್ನು ಕಳೆದುಕೊಂಡಿತು. ಪೂಜಾದಿ ಕರ್ಮಗಳನ್ನು ಪ್ರತಿಯೊಬ್ಬರು ಸ್ತ್ರೀ ಪುರುಷರೆಂಬ ಭೇದವಿಲ್ಲದೆ ಸ್ವಾತ್ಮಹಿತಾರ್ಥಕ್ಕಾಗಿ ಮಾಡುವ ಹಕ್ಕನ್ನು ಪಡೆದರು. ಇದರಲ್ಲಿಕೂಡ ಇದ್ದ ವರ್ಣಪದ್ಧತಿ ಮತ್ತು ಸ್ತ್ರೀ ಪುರುಷ ಭೇದ ಪದ್ಧತಿಗಳ ಕಟ್ಟಳೆಯ ಕಟ್ಟಡವು ನೆಲಸಮವಾಯಿತು. ಉಂಡಲ್ಲಿ ಉಡುವಲ್ಲಿ ಕುಲವನರಸುವ, ಕೊಂಬಲ್ಲಿ ಕೊಡುವಲ್ಲಿ ಕುಲವನರಸುವ ಭೇದಭಾವವು ಹೆಸರಿಲ್ಲದಂತೆ ಆಗಿಹೋಯಿತು. ಇದೆಲ್ಲ ಶ್ರೌತಪ್ರಣಾಲಿಯ ಶ್ರೌತಾಚಾರದ ಧ್ವಂಸದ ದ್ಯೋತಕ. ಇದು ಅಶ್ರೌತಾಗಮದ ಪರ್ಯಾಯ ವ್ಯವಸ್ಥೆ.

**ಸಮಾರೋಪ :**

ಶ್ರೌತ ಮತ್ತು ಅಶ್ರೌತ ಪ್ರಣಾಲಿಗಳು ಭಾರತದ ಚರಿತ್ರೆಯ ಬೆಳವಣಿಗೆಯ ಎರಡು ಶಕ್ತಿಗಳು. ಒಮ್ಮೆ ಒಂದರ ಮೇಲುಗೈ ಆದರೆ, ಇನ್ನೊಮ್ಮೆ ಮತ್ತೊಂದರ ಮೇಲುಗೈ ಆಗಿರುವದು ಭಾರತದ ಚರಿತ್ರೆಯಿಂದ ತಿಳಿದು ಬರುತ್ತದೆ. ಅಶ್ರೌತ ಪ್ರತಿಭೆ ಮಸುಕಾದಾಗ ಭಾರತದ ಉನ್ನತಿಯೆಡೆ ಮುಖವಾದ ರೇಖೆ ತೀವ್ರವಾಗಿ ಕೆಳ ಮುಖವಾಗುತ್ತದೆ. ಆ ಪ್ರತಿಭೆ ಜಾಗೃತವಾಗಿ ಮೂಲ ಪ್ರಖರತೆಯೊಡಗೂಡಿದಾಗ ಅತ್ಯಂತ ಉನ್ನತದ ಶಿಖರವನ್ನು ಮುಟ್ಟಿದೆ. ಜಗತ್ತಿನ ಯಾವುದೇ ದೇಶದ ಸಂಸ್ಕೃತಿಯ ಹಿಮಾಲಯವು ಇಷ್ಟು ಉನ್ನತವಾಗಿಲ್ಲ. ಜಗತ್ತಿನ ಯಾವುದೇ ದೇಶದ ವಸಂತಮಾಸವು ಭಾರತೀಯ ಈ ಸಾಂಸ್ಕೃತಿಕ ವಸಂತಮಾಸದಂತೆ ದಿಕ್ಕು ದಿಕ್ಕುಗಳಿಂದ ಜಿಜ್ಞಾಸು ಭೃಂಗಗಳನ್ನು ಆಕರ್ಷಿಸಿಲ್ಲ. ಈ ಅಶ್ರೌತ ಪ್ರತಿಭೆಯ ಅತ್ಯುನ್ನತ ಬೇರಡೆಯ ಗಿರಿಶೃಂಗದಿಂದ ಜನಿಸಿದ ಸಾಂಸ್ಕೃತಿಕ ಪ್ರವಾಹವು ಭಾರತೀಯ ಅಶ್ರೌತ ಪ್ರತಿಭೆಯ ಉತ್ತುಂಗ ಶೃಂಗದಿಂದ ಧುಮುಕಿದ ಗಂಗಾಪ್ರವಾಹದಂತೆ ನಿತ್ಯನವೀನ ಹಾಗೂ ಸದಾವಕಾಲ ಹರಿಗಡಿಯದೆ ಅಥವಾ ಮಾಯವಾಗದೆ ಇರುವ ಸಾಮರ್ಥ್ಯವನ್ನು ಹೊಂದಿಲ್ಲ. ಈ ಪ್ರತಿಭೆ ಯುಗಯುಗಗಳಲ್ಲಿ ಜಗತ್ತನ್ನು ಆಶ್ಚರ್ಯ ಚಕಿತಗೊಳಿಸುವಂಥ ಆತ್ಮೋನ್ನತಿಯ ನವೀನ ವಿಜ್ಞಾನ ತಂತ್ರಜ್ಞಾನವನ್ನು ಒದಗಿಸುತ್ತಲೇ ಬಂದಿದೆ. ಇದು ಭಾರತೀಯತೆಯ ಸಾರಸರ್ವಸ್ವ, ತಪೋಧನ, ಅಮೃತತೆ. ಈ ಮಾತುಗಳಿಗೇ ಈ ಚಿಕ್ಕ ಪ್ರಬಂಧದಲ್ಲಿ ಒಂದೆರಡು ಸಾಕ್ಷಿಗಳು ದೊರೆಯುತ್ತವೆ. ಈ ಪ್ರತಿಭೆಯ ಘೋಷಣೆಗಳಲ್ಲೊಂದೆರಡನ್ನು ನೋಡಬಹುದು.

ಈಶಾವಾಸ್ಯಂ ಇದಂ ಸರ್ವಂ
ಸಹನಾವವತು ಸಹನೌಭುನಕ್ತು
ಆ ನೋ ಭದ್ರಾಃ ಕ್ರತವೋ ಯಸ್ತು ವಿಶ್ವತಃ
ಅಸತೋಮಾ ಸದ್ಗಮಯ, ತಮಸೋಮಾ ಜ್ಯೋತಿರ್ಗಮಯ
Swarajya is my birth right
ಇವನಾರವ ಇವನಾರವ ನೆನ್ನದಿರಯ್ಯಾ
ಸಂಘಚ್ಛಧ್ವಂ ಸವದಧ್ವಂ
Truth is God
ಹರನೆಂಬುದೆ ಸತ್ಯ, ಸತ್ಯವೆಂಬುದೆ ಹರನು.
No one is born into this world wilh caste,



# ಗ್ರಂಥ ಸೂಚಿ


೧ ಅಲ್ಲಮನ ವಚನ ಚಂದ್ರಿಕೆ
ಡಾ. ಎಲ್. ಬಸವರಾಜು
ನಳಿನೀ ಶಂಕರ ಪ್ರಕಾಶನ,

೨ ಆಗಮ ಪರಿಜ್ಞಾನ
ಶ್ರೀ ಶಂಭುಲಿಂಗ ಶಿವಾಚಾರ್ಯರು
ಬ್ರಹ್ಮನಠ ವಿಜಾಪುರ
ಪಂಚಾಚಾರ್ಯ ಇಲ್ಟ್ರಿಕಲ್‌ಪ್ರೆಸ್ ಮೈಸೂರ
೧೯೩೦

೩ ಈ ಶೋಪನಿಷತ್ತು
ಸ್ವಾಮಿ ಆದಿದೇವಾನಂದ
ರಾಮಕೃಷ್ಣ ಆಶ್ರಮ, ಮೈಸೂರು.

೪ ಉಪನಿಷದ್ಭಾಷ್ಯಗಳು ಸಂ. ೫
ಆಧ್ಯಾತ್ಮ ಪ್ರಕಾಶನ ಕಾರ್ಯಾಲಯ,
ಹೊಳೆನರಸೀಪುರ ೧೯೫೪

೫ ಛಾಂದೋಗ್ಯೋಪನಿಷತ್ತು

೬ ತಂತ್ರಸಂಗ್ರಹ
ಮೂರುಸಾವಿರಮಠ, ಹುಬ್ಬಳ್ಳಿ ೧೯೧೪

೭ ತೈತ್ತರೀಯ ಉಪನಿಷತ್ತು
ಸ್ವಾಮಿ ಆದಿದೇವಾನಂದ
ರಾಮಕೃಷ್ಣ ಆಶ್ರಮ, ಮೈಸೂರು ೧೯೭೬

೮ ದೇವರ ದಾಸಿಮಯ್ಯನ ವಚನಗಳು
ಫ. ಗು. ಹಳಕಟ್ಟಿ ವಿಜಾಪುರ ೧೯೨೯

೯ ಬಸವಣ್ಣನವರ ವಚನಗಳು
ಎಸ್. ಎಸ್. ಬಸವನಾಳ
ಎಲ್. ಇ. ಅಸೋಸಿಯೇಶನ್,
ಧಾರವಾಡ ೧೯೬೨

೧೦ ಬೃಹದಾರಣ್ಯಕೋಪನಿಷತ್ತು

೧೧ ಮಾಂಡೂಕ್ಯೋಪ ನಿಷತ್ತು ಮತ್ತು
ಗೌಡಪಾದ ಕಾರಿಕಾ ಸಹಿತ
ಸ್ವಾಮಿ ಆದಿದೇವಾನಂದ
ರಾಮಕೃಷ್ಣ ಆಶ್ರಮ,ಮೈಸೂರು ೧೯೫೮

೧೨ ರುದ್ರದೇವನ ವಿಶ್ವವೈಭವ ಕ್ರಾಂತಿ
ಡಾ. ಜಚನಿ
ಶ್ರೀ ಜಚನಿ ಅಧ್ಯಯನಪೀಠ ಮತ್ತು
ಸಂಶೋಧನ ಸಂಸ್ಥೆ ಬೆಂಗಳೂರು ೧೯೮೮

೧೩ ವಚನ ಶಾಸ್ತ್ರರಹಸ್ಯ
ರಂ. ರಾ. ದಿವಾಕರ
ಮೂರುಸಾವಿರಮಠ ಹುಬ್ಬಳ್ಳಿ ೧೯೬೮

೧೪ ವೀರಶೈವ ಉಗಮ ಹಾಗೂ ಪ್ರಗತಿ
ಟಿ. ಎನ್. ಮಲ್ಲಪ್ಪ

೧೫ ವೀರಶೈವ ಸದಾಚಾರ ಸಂಗ್ರಹ
ಬಸವರಾಜಶಾಸ್ತ್ರಿ ಪಗಡದಿನ್ನಿ
ಮೂರುಸಾವಿರಮಠ, ಹುಬ್ಬಳ್ಳಿ ೧೯೬೪

೧೬ ಶಿವಾಗಮ ಸೌರಭ
ಡಾ. ಜಚನಿ ಅಧ್ಯಯನಪೀಠ ಮತ್ತು
ಸಂಶೋಧನ ಸಂಸ್ಥೆ ಬೆಂಗಳೂರು

೧೭ ಶಿವಾನುಭವ ೧೯೨೮ ಸಪ್ಟೆಂಬರ
ಸಂ. ಫ. ಗು. ಹಳಕಟ್ಟಿ ವಿಜಾಪುರ

೧೮ ಶಿವಶರಣೆಯರ ವಚನಗಳು ಭಾಗ ೧
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೬೮

೧೯ ಶೂನ್ಯಸಂಪಾದನೆ
ಫ. ಗು. ಹಳಕಟ್ಟಿ ವಿಜಾಪುರ ೧೯೩೦

೨೦ ಶ್ರೀಕರ ಭಾಷ್ಯ
(ಅನುವಾದ) ಡಾ. ಟಿ. ಜಿ. ಸಿದ್ಧಪ್ಪಾ

ರಾಧ್ಯ ಪಂಚಾಚಾರ್ಯ ಇಲೆಕ್ಟ್ರಿಕಲ್ ಪ್ರೆಸ್,
ಮೈಸೂರು ೧೯೬೩

೨೧ ಶ್ವೇತಾಶ್ವತರೋಪನಿಷತ್ತು
ಸ್ವಾಮಿ ಆದಿದೇವಾನಂದ ರಾಮಕೃಷ್ಣ
ಆಶ್ರಮ ಮೈಸೂರು ೧೯೬೨

೨೨ ಶ್ರೀಮದಲ್ಲಮಪ್ರೋಮ
ಸಿದ್ಧರಾಮಪ್ಪ ದುಂಡಪ್ಪ ಪಾವಟೆ
ಹುಬ್ಬಳ್ಳಿ ೧೯೨೦

೨೩ ಶ್ರೀಲಲಿತೋಪಾಖ್ಯಾನ
ರಾಮಕೃಷ್ಣಾಶ್ರಮ, ಮೈಸೂರು

೨೪ ಷಟ್‌ಸ್ಥಲಶಾಸ್ತ್ರ ಉಭಯಮಾರ್ಗ
ಬೋಧಿನಿ
ಪಂ. ಗೌರೀನಾಥ ಶಾಸ್ತ್ರಿಗಳು
ಇಲಾಳ ೧೯೫೭

೨೫ ಷಡಕ್ಷರ ಮಹಾಕವಿಕೃತ ಶಿವಸ ನ
ಮಂಜರಿ
ಶ್ರೀ ವಿದ್ಯಾ ಪ್ರಕಾಶನ,
ಧಾರವಾಡ ೧೯೯೦

೨೬ ಹಿಂದೂದರ್ಶನ ಸಾರ
ಮ.ಮ. ಪಂ.ರತ್ನಂ ಲಕ್ಷ್ಮೀಪುರ
ಶ್ರೀನಿವಾಸಾಚಾರ್ಯ ಮೈಸೂರು
ವಿಶ್ವವಿದ್ಯಾಲಯ, ಮೈಸೂರು

೨೭ A Constructive survey of
Upani sadic Philosophy
Dr. R. D. Ranade
Bilwakunja, Heranda Vibhag
Pune 1927

೨೮ Atharva veda pippalada
samhite Sriti prabha
Dr. Sampurnanada
Genesh & Com (Ltd)
Madras 1956

೨೯ Dialogue in Indian
Tradition
J. B. Chethi mattam

೩೦ Eight Upanisads
Sri Aurobino
Sri Aurobindo Ashram
Pandecherry 1965

೩೧ Geeta Rahasya vol. I
Lokamanya Tilak

೩೨ Indian Logic And Atomism
Dr. A. B. Keith
Oxford Press, Oxford 192

೩೩ Indian Philosophy vol II
Dr. S. Radhakrishnan
George Allen & Unwin
London 1956

೩೪ Indian Philosophy vol. I
Dr. S. Radhakrishnan
George Allen & Unwin
Londen 1956

೩೫ Karnatak University
Journal vol. VI
Karnatak University,
Dharwad 1962

೩೬ Out lines of Indian
Philosophy
Prof. M. Hiriyanna
George Allen & Unwin
London 1958

೩೭ Ramanujas Teachings in

his own words
M. Yamunacarya
Bhavans Book's University
Bombay 1970

೩೮ Religion and Philophy of the Vedas vol. I
Oxford press, oxford 1927

೩೯ Sri Sankara's Teachings in his own words
Swami Atmananda
Bhavans Books University
Bombay 1964

೪೦ The Bhagawadgita
Commentary by
Swami Chidbhavananda
Tapowan Publishing House
Tirapparaitturai 1965

೪೧ The Cultural Heritage of India vol. IV
Ramakrishna Mission
Culcatta 1975

೪೨ The Discovery of India
Jawaharlal Nehru
Meridian Books (Ltd) 1951

೪೩ The Renaissance in India
Sri Aurobindo
Aryan Publication 1949

೪೪ The Saints of India
Dr. T.M.P. Mahadevan
Bhavans Books University
Bombay

೪೫ The Sankhya Karika of Iswarakrishna
T. G. Mainkar
Oriental Book Agency
Poona 1964

೪೬ Upanisads Pt. I
Max Mullar
Dovers Publication 1962

೪೭ Vedanta Sutra with Ramanujas commentary
George Thibout
Motilal Banarsi Das
Delhi 1976

೪೮ Vedic Prayers
Swami Sambuddhananda
Ramakrishna Misson
Bombay 1945

೪೯ Verasaiva Philosophy of the Saivagamas
Siddharamapp Dundappa
Pavate
Hubli 1927



## ಇದೇ ಲೇಖಕರಿಂದ







ಬೆಳಗಾವಿ ತಾಲೂಕಿನ ಸಂಪರ್ಕವಿಲ್ಲದ ಹಳ್ಳಿ, ಕಣವಿಕರವಿನಕೊಪ್ಪ, ಡಾ. ವಿ. ಎಸ್. ಕಂಬಿಯವರ ಜನ್ಮಗ್ರಾಮ. ೧೯೨೭ ನವೆಂಬರ ೨೫ ರಂದು ಜನಿಸಿದ ಅವರು ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮದಿ ಪ್ರಾರಂಭಿಸಿದರು. ಬೆಳಗಾವಿಯ ಕೆ. ಎಲ್. ಇ. ಸಂಸ್ಥೆಯ ವಿದ್ಯಾ ಕೇಂದ್ರಗಳಲ್ಲಿ ಮಾಧ್ಯಮಿಕ ಮತ್ತು ಉಚ್ಚ ಶಿಕ್ಷಣ ಮುಗಿಸಿದರು. ಎಂ. ಎ. ಮತ್ತು ಪಿ. ಎಚ್.ಡಿ. ಪದವಿಗಳನ್ನು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪಡೆದರು. ಪಿ. ಎಚ್. ಡಿ. ಗಾಗಿ ಬರೆದ Sasthala in Virasaivism— A Philosophical Study ಎಂಬ ಪ್ರಬಂಧಕ್ಕೆ ಕರ್ನಾಟಕ ವಿಶ್ವವಿದ್ಯಾಲಯವು ಬಂಗಾರ ಪದಕ ಕೊಟ್ಟಿತು.

ನಲವತ್ತರ ದಶಕದಲ್ಲಿ ಸಾಹಿತ್ಯಿಕ, ಸಾಂಸ್ಕೃತಿಕ ಕ್ಷೇತ್ರಗಳಂತೆಯೇ ಸ್ವಾತಂತ್ರ್ಯ ಸಂಗ್ರಾಮ ನಾಯಕರೊಡನೆ ಸಂಪರ್ಕವನ್ನು ಡಾ. ಕಂಬಿಯವರು ಇಟ್ಟು ಕೊಂಡವರು. ಹೈಸ್ಕೂಲ ಶಾಲೆಯ ವಿದ್ಯಾರ್ಥಿಯಾಗಿ ಬರೆದ ಕವನ ಮತ್ತು ಪ್ರಬಂಧಗಳಿಂದ ಹಲಸಂಗಿಯ ಮಧುರ ಚೆನ್ನರ ಮೆಚ್ಚುಗೆ ಪಡೆದರು. ೧೯೫೧ ರಲ್ಲಿ ಜರುಗಿದ ಬೆಳಗಾವಿ ಜಿಲ್ಲೆಯ ಯುವಕವಿ ಸಮ್ಮೇಳನದ ಅಧ್ಯಕ್ಷರಾಗಿ ಗೌರವಿಸಲ್ಪಟ್ಟರು.

ಬೆಳಗಾವಿ ತಾಲೂಕಿನ ಡಾ. ಎಂ. ಎಸ್. ಲಠ್ಠೆ, ಬಿ. ಆರ್. ಪಾಟೀಲ, ಅವರೊಂದಿಗೆ ಸಮಾಜ ಸೇವಾ ಸಂಘಟಕರಾಗಿ ಡಾ. ಕಂಬಿಯವರು ಬೆಳಗಾವಿ ಜಿಲ್ಲೆಯ ಕೆಲವೆಡೆ ವೈಚಾರಿಕ ಜಾಗೃತಿಯಲ್ಲಿ ತೊಡಗಿದರು.

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ೧೯೬೫ ರಲ್ಲಿ ಸಂಶೋಧನ ಸಹಾಯಕರಾಗಿ ಸೇರಿ ಸಂಪಾದನೆ, ಸಂಶೋಧನೆ, ಬೋಧನೆಯೊಂದಿಗೆ ವಿವಿಧ ವಿಶ್ವವಿದ್ಯಾಲಯಗಳ, ಸಂಶೋಧನ ಕೇಂದ್ರಗಳ ಪ್ರೌಢ ಪತ್ರಿಕೆಗಳಲ್ಲಿ ಸಂಶೋಧನ ಪ್ರಬಂಧಗಳನ್ನು ಕನ್ನಡ ಮತ್ತು ಇಂಗ್ಲೀಷಗಳಲ್ಲಿ ಪ್ರಕಟಿಸಲುದ್ಯುಕ್ತರಾದರು. ವಿಶ್ವವಿದ್ಯಾಲಯದ ಪ್ರಚಾರೋಪನ್ಯಾಸ ಮಾಲಿಕೆಯಲ್ಲಿ ಭಾಗವಹಿಸಿದರು.

ಬಸವ ಸಮಿತಿಯ 'ಬಸವಪಥ' ಪತ್ರಿಕೆಯ ಸಂಪಾದಕ ಮಂಡಲಿಯ ಸದಸ್ಯ, ಕರ್ನಾಟಕ ವಿಶ್ವವಿದ್ಯಾಲಯದ ಆರ್ಟ್ಸ್‌ಫ್ಯಾಕಲ್ಟಿ, ಸದಸ್ಯ, ಪಿ. ಎಚ್. ಡಿ. ವಿದ್ಯಾರ್ಥಿಗಳ ಮಾರ್ಗದರ್ಶಕ, ರಾಣಿ ಚನ್ನಮ್ಮ ಶಿಕಣ ವಿಶ್ವಸ್ಥ ಸಮಿತಿಯ ಅಭಿವೃದ್ಧಿ ಕಮೀಟಿಯ ಕಾರ್ಯದರ್ಶಿ, ನಾಗನೂರ ಶ್ರೀ ಶಿವಬಸವಸ್ವಾಮಿಗಳ ಪ್ರಸಾದನಿಲಯದ ಹಳೆಯ ವಿದ್ಯಾರ್ಥಿಗಳ ಸಂಘದ ಅಧ್ಯಕ್ಷ, ನಾಗನೂರ ಶ್ರೀಗಳ ಶತಮಾನೋತ್ಸವ ಮತ್ತು ಸಮಿತಿಯ ಸಾಹಿತ್ಯ ವಿಭಾಗದ ಸದಸ್ಯ, ಕ. ಸಾ. ಪರಿಷತ್, ಕರ್ನಾಟಕ ವಿದ್ಯಾಭಿವೃದ್ಧಿ ಸಂಘ, ಎಲ್. ಇ. ಅಸೋಸಿಯೇಶನ್ ಮುಂತಾದ ಸಂಸ್ಥೆಗಳ ಸದಸ್ಯ, ಆಲ್ ಇಂಡಿಯ ಫಿಲಾಸಫಿಕಲ್ ಕಾಂಗ್ರೆಸ್. ಓರಿಯಂಟಲ್ ಕಾನ್ಫರನ್ಸ್, ವರ್ಲ್ಡ್‌ಸಂಸ್ಕೃತ ಕಾನ್ಫರನ್ಸ್‌ಗಳ ಸದಸ್ಯರಾಗಿ ಸಕ್ರಿಯವಾಗಿ ಭಾಗವಹಿಸಿಸಿದ್ದಾರೆ.

ವೀರಶೈವ ಸಿದ್ಧಾಂತ ಸಾಹಿತ್ಯ ಕುರಿತು ವಿಪುಲ ಕೃತಿಗಳನ್ನು ರಚಿಸಿದ್ದು ವಿಶ್ವವಿದ್ಯಾಲಯಗಳ ಅನುದಾನ ಯೋಜನೆಗಯಾದ ಶೂನ್ಯ ಸಂಪಾದನೆಯ ಇಂಗ್ಲಿಷ ಅನುವಾದ ಕಾರ್ಯದಲ್ಲಿ, ವಚನ ಸಾಹಿತ್ಯ ಮತ್ತು ಸಾಹಿತ್ಯ ಸಂಪಾದನೆಯಲಿ ಆಸಕ್ತಿಯಿಂದ ದುಡಿದಿದ್ದಾರೆ. ಐ. ಸಿ. ಎಚ್.ಆರ್. ಭಾಷಾಂತರ ಯೋಜನೆಯಲಿ ಓರಿಜಿನ್ ಆಂಡ್ ಡೆವಲಪ್‌ಮೆಂಟ ಆಫ್ ವೈಷ್ಣವಿಜಂ ಎಂಬ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿದರು. ಸಾಧುಸಂತರ, ಶರಣರ, ಸಮಾಜ ಸೇವೆ ಹಾಗೂ ರಾಷ್ಟ್ರವಿಮೋಚನೆ ಮತ್ತು ನಿರ್ಮಾಣ ಕಾರ್ಯದಲ್ಲಿ ದುಡಿದವರ ಚರಿತ್ರೆಗಳನ್ನು ಬರೆದ ಡಾ. ಕಂಬಿಯವರು ಸಾತ್ವಿಕ ಬದುಕು ಬರಹಗಳಲ್ಲಿ ತೊಡಗಿದವರು. ಪ್ರಸಿದ್ಧಿ ಪ್ರಚಾರ ವಿಮುಖ ಅಂತರ್ಮುಖಿ ಜೀವನ ದೃಷ್ಟಿ ಅನುಕರಣೀಯ, ಗಮನಾರ್ಹ. ನಿವೃತ್ತಿಯ ಪ್ರಶಾಂತ ಬದುಕಿನಲ್ಲಿ ಇನ್ನು ಹಲವು ಹತ್ತು ಕೃತಿರಚನೆಯ ಯೋಜನೆಗಳ ಹೊಳಹು ಹಾಕುತ್ತ ತರುಣರನ್ನು ನಾಚಿಸುವ ಉತ್ಸಾಹಿ ತಪಸ್ವೀ ಡಾ. ಕಂಬಿಯವರ ಬಗ್ಗೆ ಕುತೂಹಲ ಕೆರಳದಿರದು.